# ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೨೦೦೭-೨೦೦೮ನೇ ಸಾಲಿನ ಕನ್ನಡ ಎಂ.ಫಿಲ್. ಪದವಿಯ ಭಾಗವಾಗಿ
ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಸಂಶೋಧನಾ ನಿಬಂಧ

## "ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕೆಳವರ್ಗದ ಜೀವನ ಚಿತ್ರಣ"


ಮಾರ್ಗದರ್ಶಕರು
ಪ್ರೊ. ಸುಧಾಕರ್
ನಿವೃತ್ತ ಕನ್ನಡ ಪ್ರಾಧ್ಯಾಪಕರು,
ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು.

ನಿಬಂಧಕಾರರು:
ಕೆ.ಎಲ್. ಕಾಂಚನಮಾಲ
ಕನ್ನಡ ಎಂ.ಫಿಲ್. ವಿದ್ಯಾರ್ಥಿ,
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
ಕುವೆಂಪು ವಿದ್ಯಾವರ್ಧಕ ಟ್ರಸ್ಟ್,
ಜಯಲಕ್ಷ್ಮಿ ಪುರಂ,
ಮೈಸೂರು.

# ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೨೦೦೭-೨೦೦೮ನೇ ಸಾಲಿನ ಕನ್ನಡ ಎಂ.ಫಿಲ್. ಪದವಿಯ ಭಾಗವಾಗಿ
ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ಸಂಶೋಧನಾ ನಿಬಂಧ

## "ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕೆಳವರ್ಗದ ಜೀವನ ಚಿತ್ರಣ"

ಮಾರ್ಗದರ್ಶಕರು
ಪ್ರೊ. ಸುಧಾಕರ್
ನಿವೃತ್ತ ಕನ್ನಡ ಪ್ರಾಧ್ಯಾಪಕರು,
ಮೈಸೂರು ವಿಶ್ವ ವಿದ್ಯಾನಿಲಯ, ಮೈಸೂರು.



ನಿಬಂಧಕಾರರು:
ಕೆ.ಎಲ್. ಕಾಂಚನಮಾಲ
ಕನ್ನಡ ಎಂ.ಫಿಲ್. ವಿದ್ಯಾರ್ಥಿ,
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.
ಕುವೆಂಪು ವಿದ್ಯಾವರ್ಧಕ ಟ್ರಸ್ಟ್,
ಜಯಲಕ್ಷ್ಮಿ ಪುರಂ,
ಮೈಸೂರು.

# ಅಭ್ಯರ್ಥಿಯ ಘೋಷಣಾ ಪತ್ರ

**ಪ್ರೊ. ಸುಧಾಕರ**, ನಿವೃತ್ತ ಕನ್ನಡ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ಇವರ ಮಾರ್ಗದರ್ಶನದಲ್ಲಿ **"ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕೆಳವರ್ಗದ ಜೀವನ ಚಿತ್ರಣ"** ಎಂಬ ವಿಷಯದ ಬಗೆಗೆ ನಡೆಸಿದ ಅಧ್ಯಯನದ ಫಲವೇ ಈ ನಿಬಂಧ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ, ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 30/8/08
ಸ್ಥಳ : ಮೈಸೂರು

ಕಾಂಚನಮಾಲ. ಕೆ.ಎಲ್

ಕೆ.ಎಲ್.ಕಾಂಚನಮಾಲ
ನಿಬಂಧಕಾರರು
೨೦೦೭-೦೮ನೇ ಸಾಲಿನ ಎಂ.ಫಿಲ್. ವಿದ್ಯಾರ್ಥಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್,
ಜಯಲಕ್ಷ್ಮಿಪುರಂ, ಮೈಸೂರು.

## ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕನ್ನಡ ಎಂ.ಫಿಲ್.ಪದವಿಯ ವಿದ್ಯಾರ್ಥಿಯಾದ **ಕೆ.ಎಲ್.ಕಾಂಚನಮಾಲ** ಅವರು ನನ್ನ ಮಾರ್ಗದರ್ಶನದಲ್ಲಿ **"ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕೆಳವರ್ಗದ ಜೀವನ ಚಿತ್ರಣ"** ಎಂಬ ಶೀರ್ಷಿಕೆಯ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ, ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇವೆ.

ದಿನಾಂಕ: 30/8/08
ಸ್ಥಳ : ಮೈಸೂರು

ಮಾರ್ಗದರ್ಶಕರು
ಪ್ರೊ. ಸುಧಾಕರ
ನಿವೃತ್ತ ಕನ್ನಡ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

# "ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕೆಳವರ್ಗದ ಜೀವನ ಚಿತ್ರಣ"

## ಪರಿವಿಡಿ

# ೧. ಪೀಠಿಕೆ

೨೦ನೇ ಶತಮಾನ ಮಾನವ ಇತಿಹಾಸದಲ್ಲಿ ಸಂಕೀರ್ಣವಾದ ಕಾಲ ಭಾರತದ ಮಟ್ಟಿಗಂತೂ ಈ ಶತಮಾನ ಇನ್ನೂ ಸಂಕೀರ್ಣವಾದುದು. ಹತ್ತು ಹಲವು ಬಗೆಯ ಸವಾಲುಗಳನ್ನು ಎದುರಿಸುತ್ತಾ, ಬಿಕ್ಕಟ್ಟುಗಳಿಂದ ಬಿಡಿಸಿಕೊಳ್ಳುತ್ತ ಬಿಡಿಸಿಕೊಂಡಂತೆ ತೋರಿದ ಪರಿಹಾರಗಳ ಒಡಲಲ್ಲಿಯೇ ಹುಟ್ಟಿಕೊಂಡ ಬೇರೆ ಸ್ವರೂಪದ ಸಮಸ್ಯೆಗಳಿಗೆ ಎದುರಾಗಬೇಕಾದ ಆತಂಕದ ಪರಿಸ್ಥಿತಿಯಲ್ಲಿ ಈ ಶತಮಾನವನ್ನು ಕಳೆದಿದೆ. ಈ ಅವಧಿಯಲ್ಲಿ ಬ್ರಿಟಿಷ್ ವಸಾಹತುಶಾಹಿಯ ಹಿಡಿತದಿಂದ ಬಿಡುಗಡೆ ಹೊಂದುವ ಹಂಬಲ ಅದಕ್ಕಾಗಿ ನಡೆಸಿದ ಹೋರಾಟ ಮಹತ್ವವಾದದ್ದು.

ಸೂರ್ಯ ಮುಳುಗದ ಬ್ರಿಟಿಷ್ ಸಾಮ್ರಾಜ್ಯಶಾಹಿಯೊಡನೆ ಅಹಿಂಸಾ ಮಾರ್ಗದಲ್ಲಿ ಹೋರಾಡಿ ಸ್ವಾತಂತ್ರ್ಯ ಪಡೆಯುವ ಸಾತ್ವಿಕ ಸಂಕಲ್ಪ, ಸ್ವತಂತ್ರ ಪಡೆಯುತ್ತಿರುವ ಸಂಭ್ರಮದೊಂದಿಗೆ ಮತಧರ್ಮದ ಆಧಾರದ ಮೇಲೆ ದೇಶವು ಇಬ್ಭಾಗವಾದ ಯಾತನೆ, ಪಾಶ್ಚಾತ್ಯ ಮತ್ತು ಭಾರತೀಯ ಸಂಸ್ಕೃತಿಯ ಮುಖಾಮುಖಿ, ಶತಮಾನಗಳಿಂದ ಹುಟ್ಟು ನಿರ್ಧರಿಸುತ್ತ ಬಂದ ಜಾತಿ-ಜಾತಿಗಳ ನಡುವಿನ ಮೇಲು-ಕೀಳೆಂಬ ಸಾಮಾಜಿಕ ಅಸಮಾನತೆ, ಲಿಂಗಾಧಾರಿತ ಪರಂಪರಾಗತ ಮನಸ್ಥಿತಿ ಇಂಥ ನೂರಾರು ಸವಾಲುಗಳನ್ನು ಈ ಕಾಲಘಟ್ಟದಲ್ಲಿ ದೇಶ ಎದುರಿಸಬೇಕಾಯ್ತು.

ಈ ಎಲ್ಲ ಪ್ರೇರಣೆ ಪ್ರಭಾವಗಳೊಂದಿಗೆ ಹುಟ್ಟಿಕೊಂಡ ೨೦ನೇ ಶತಮಾನದ ಆಧುನಿಕ ಕನ್ನಡ ಸಾಹಿತ್ಯ ಮುಖ್ಯವಾಗಿ ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಎಂಬ ಮಾರ್ಗಗಳಲ್ಲಿ ಅವಸ್ಥಾಂತರಗೊಳ್ಳುತ್ತ, ಶ್ರೀಮಂತಗೊಳ್ಳುತ್ತಾ ಬೆಳೆದು ಬಂದಿದೆ.

ಈ ವೈವಿಧ್ಯಮಯ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದ ಅನೇಕ ಬರಹಗಾರರು ನಮ್ಮ ನಾಡು-ನುಡಿ, ನೆಲ-ಜಲ, ಜಾತಿ-ಧರ್ಮ ಇತ್ಯಾದಿ ವಿಚಾರಗಳ ಬಗೆಗೆ ಜನರಲ್ಲಿ ವೈಚಾರಿಕ ಮನೋಭಾವವನ್ನು ಬೆಳೆಸುವ ಪ್ರಯತ್ನ ಮಾಡಿದ್ದಾರೆ. ಅದರಲ್ಲೂ ಶತ-ಶತಮಾನಗಳಿಂದ ಭಾರತೀಯರಲ್ಲಿ ದೊಡ್ಡ ಕಂದಕವನ್ನ ಸೃಷ್ಟಿಸಿದ ಜಾತಿ ವ್ಯವಸ್ಥೆಯನ್ನು ಕುರಿತು ಸಾಹಿತ್ಯ ಕೃತಿಗಳನ್ನು ರಚಿಸಿದ ದೊಡ್ಡ ಲೇಖಕರ ಪಡೆಯೇ ಕರ್ನಾಟಕದಲ್ಲಿ ಎದ್ದು ನಿಂತಿದೆ.

ಆರಂಭದ ಕಾಲಘಟ್ಟಕ್ಕೆ ಸರಳವಾಗಿದ್ದ ಜಾತಿ ವ್ಯವಸ್ಥೆ ಕ್ರಮೇಣ ಸಂಕೀರ್ಣವಾಗಿ ಪ್ರಸ್ತುತ ಸಾಮಾಜಿಕ ವ್ಯವಸ್ಥೆಯಲ್ಲಿ ದೊಡ್ಡ ಪಿಡುಗಾಗಿ ಆವರಿಸಿದೆ. ಜಾತಿಯ ಶ್ರೇಣೀಕರಣದಲ್ಲಿ ಮೇಲ್ವರ್ಗದವರಿಂದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಶೈಕ್ಷಣಿಕವಾಗಿ ಕೆಳವರ್ಗದ ಜನ ಶೋಷಣೆಗೆ ಒಳಗಾಗುತ್ತ ಅನೇಕ ಮೂಲಭೂತ ಸವಲತ್ತುಗಳಿಂದ ವಂಚಿತವಾಗಿರುವುದು ದೊಡ್ಡ ವಿಪರ್ಯಾಸ. ಈ ರೀತಿ ಪಾರಂಪರಿಕವಾಗಿ ಶೋಷಣೆಗೆ ಒಳಗಾದವರಲ್ಲಿ ಪ್ರಮುಖರಾದವರೆಂದರೆ ದಲಿತರು ಈ ರೀತಿ ದಲಿತರು ಎದುರಿಸಿದ ಸಮಸ್ಯೆಗಳನ್ನು ಕುರಿತು ರಚನೆಯಾದ ಹೊಸಗನ್ನಡ ಸಾಹಿತ್ಯ ಕೃತಿಗಳನ್ನು ಎರಡು ರೀತಿಯಲ್ಲಿ ವಿಂಗಡಿಸಬಹುದು.

೧. ಹರಿಜನರ ಸಮಸ್ಯೆಗಳನ್ನೆ ಕೇಂದ್ರವಾಗಿಸಿಕೊಂಡ ಕಾದಂಬರಿಗಳು ಶಿವರಾಮಕಾರಂತರ 'ಚೋಮನದುಡಿ' (೧೯೩೩) ಗೊರೂರು ರಾಮಸ್ವಾಮಿ ಅಯ್ಯಂಗಾರರ 'ಹೇಮಾವತಿ' (೧೯೪೫) 'ಮಾದನ ಮಗಳು', ಬಸವರಾಜ ಕಟ್ಟೀಮನಿ ಅವರ 'ನೀ ನನ್ನ ಮುಟ್ಟಬೇಡ' ಯು.ಆರ್.ಅನಂತಮೂರ್ತಿಯವರ 'ಭಾರತೀಪುರ', ಎಸ್.ಎಲ್.ಭೈರಪ್ಪನವರ 'ದಾಟು', ಬರಗೂರು ರಾಮಚಂದ್ರಪ್ಪನವರ 'ಒಂದು ಊರಿನ ಕಥೆ' ದೇವನೂರು ಮಹಾದೇವ ಅವರ 'ಕುಸುಮಬಾಲೆ' ಮುಖ್ಯವಾದವು.

೨. ಇತರ ವಿಚಾರಗಳ ಜೊತೆಗೆ ಹರಿಜನರ ಸಮಸ್ಯೆಗಳೂ ಚಿತ್ರಿತವಾಗಿರುವ ಕೃತಿಗಳೆಂದರೆ ರಾವ್‌ಬಹದ್ದೂರರ 'ಗ್ರಾಮಾಯಣ',ಮಹಾಕವಿ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' (೧೯೬೭) ಪ್ರಮುಖವಾದವು.

ಪ್ರಸ್ತುತ ಶ್ರೀ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯನ್ನು ಮುಖ್ಯ ಆಕಾರವನ್ನಾಗಿ ಮಾಡಿಕೊಂಡು ಆ ಕಾದಂಬರಿಯಲ್ಲಿ ಚಿತ್ರಿತವಾಗಿರುವ ಕೆಳವರ್ಗದ ಜೀವನವನ್ನು ನನ್ನ ಸಂಶೋಧನಾ ನಿಬಂಧಕ್ಕೆ ವಸ್ತುವೆಂದು ಆರಿಸಿಕೊಂಡಿರುತ್ತೇನೆ.

# ೨. ಸಾಮಾಜಿಕ ಪರಿವರ್ತನೆಯ ಹರಿಕಾರರಾಗಿ ಕುವೆಂಪು

ಜಗತ್ತಿಗೆ ವಿಶ್ವಮಾನವ ಸಂದೇಶವನ್ನು ಸಾರಿ 'ಯುಗದ ಕವಿ ಜಗದ ಕವಿ' ಎನಿಸಿಕೊಂಡ ಮಹಾನ್ ಚೇತನ ಕುವೆಂಪು. ಇವರು ಕೇವಲ ವ್ಯಕ್ತಿಯಲ್ಲ ಕನ್ನಡ ಸಾಹಿತ್ಯ ಕಂಡ ಮಹಾನ್ ಶಕ್ತಿ. ಲೇಖಕ, ಸಂಸ್ಕೃತಿ ಚಿಂತಕ, ನಾಟಕಕಾರ, ಕಾದಂಬರಿಕಾರ, ಕವಿ, ಮಹಾಕವಿ, ವಿಮರ್ಶಕ, ದಾರ್ಶನಿಕರಾಗಿ ಬದುಕಿದ್ದಾಗಲೇ ದಂತಕಥೆಯಾದವರು.

ನವೋದಯ ಕಾಲದ ಅತ್ಯುನ್ನತ ಶಿಖರ ಎನಿಸಿಕೊಂಡ ಈ ರಸಋಷಿ ತನ್ನ ಕಾಲಮಾನದ ಎಲ್ಲ ಆಶಯಗಳನ್ನು ತಮ್ಮ ಸಾಹಿತ್ಯ ಕೃತಿಗಳಲ್ಲಿ ಗರ್ಭೀಕರಿಸಿಕೊಂಡವರು. ಆದರ್ಶ, ರಾಷ್ಟ್ರ-ಪ್ರೇಮ, ನಾಡು-ನುಡಿ, ಪ್ರೀತಿ, ಪ್ರಕೃತಿಆರಾಧನೆ, ಕನಸುಗಾರಿಕೆ, ದೈವಭೀರುತ್ವ, ಧರ್ಮಶ್ರದ್ಧೆ, ಸಾಮಾಜಿಕ ಕಳಕಳಿ ಮುಖ್ಯವಾಗಿ ವೈಚಾರಿಕ ಮತ್ತು ವೈಜ್ಞಾನಿಕ ಮನೋಭಾವಗಳನ್ನು ಎತ್ತಿಹಿಡಿದವರು.

"ಜೀವಜಗತ್ತಿನಲ್ಲಿ ಅಪರೂಪವೆನಿಸಿದ ಮಾನವ ಬದುಕನ್ನು ದೊಡ್ಡದಾಗಿ ಕಂಡವರು ಕುವೆಂಪು ಬಹುಶಃ ಶಿವಶರಣರ ತರುವಾಯ ನಿಜವಾದ ಅರ್ಥದಲ್ಲಿ ಬದುಕು ಮತ್ತು ಸಾಹಿತ್ಯವನ್ನು ಬೆಸೆದು ಭೂತ-ವರ್ತಮಾನ ಸಂಸ್ಕೃತಿಗಳೆರಡನ್ನು ಮುಖಾಮುಖಿಯಾಗಿರಿಸಿ ಸರಿ-ತಪ್ಪುಗಳನ್ನು ಪ್ರಖರವಾಗಿ ಅಭಿವ್ಯಕ್ತಿಸಿದವರು"೧ ಸಾರ್ವತ್ರಿಕವಾದ ಸಾಮಾಜಿಕ ಕಳಕಳಿಯನ್ನು ಹೊಂದಿದ್ದ ಇವರು ಸಾಮ್ರಾಜ್ಯಶಾಹಿ, ಬಂಡವಾಳ ಶಾಹಿ, ಮತ್ತು ಅಧಿಕಾರಶಾಹಿ ಧೋರಣೆಯನ್ನು, ಸಾಂಸ್ಥಿಕ ಧರ್ಮವನ್ನು ನಿರಾಕರಿಸಿ ಗುಡಿ ಚರ್ಚು ಮಸೀದಿಗಳ ಬಿಟ್ಟು ಹೊರಬನ್ನಿರೆಂದು ಕರೆ ನೀಡಿದರು. ಪ್ರತಿಯೊಂದು ಚೈತನ್ಯವೂ ವಿಶ್ವ ಚೇತನವಾಗಬೇಕೆಂಬ ಕನಸು ಕಾಣುವ ಆಧುನಿಕ ಕನ್ನಡ ಸಾಹಿತ್ಯದ ಬೇರೆಲ್ಲ ಸಾಹಿತಿಗಳಿಗಿಂತ ಭಿನ್ನವಾಗಿ ನಿಂತವರು.

ಐರೋಪ್ಯ ಸಾಹಿತ್ಯದ ಹೊಸಗಾಳಿ ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಬೀಸುತ್ತಿದ್ದಂತೆ ಇಲ್ಲಿಗೆ ಆಗಮಿಸಿದ ಸಾಹಿತ್ಯ ಪ್ರಕಾರಗಳು ಹಲವು ಬಗೆಯವು. ಈ ಎಲ್ಲ ಪ್ರಕಾರಗಳಲ್ಲಿಯೂ ತಮ್ಮದೇ ಆದ ವಿಶೇಷ ಛಾಪು ಮೂಡಿಸಿ 'ಆಡು ಮುಟ್ಟದ ಸೊಪ್ಪಿಲ್ಲ' ಕುವೆಂಪು ಕೈಯಾಡಿಸದ ಸಾಹಿತ್ಯ ಪ್ರಕಾರಗಳಿಲ್ಲ ಎಂಬ ಹೆಗ್ಗಳಿಕೆಗೆ ಪಾತ್ರರಾದವರು.

ಕುವೆಂಪುರವರ ಸಾಹಿತ್ಯ ಕೃಷಿಯನ್ನು ಗಮನಿಸುವುದಾದರೆ ಸುಮಾರು ಮೂರು ಸಾವಿರ ಶಿಶುಗೀತೆಗಳು, ಎರಡು ಕಾದಂಬರಿಗಳೂ, ಎರಡು ಖಂಡಕಾವ್ಯಗಳು, ಹದಿಮೂರು ನಾಟಕಗಳು, ಎಂಟು ವಿಮರ್ಶಾ ಸಂಕಲನಗಳು, ಮೂರು ಕಥಾಸಂಕಲನಗಳು, ಒಂದು ಆತ್ಮಚರಿತ್ರೆ ಹಾಗೂ ಮಹಾಕಾವ್ಯಗಳ ಯುಗ ಮುಗಿದೇ ಹೋಯಿತು ಎಂಬ ನಿರಾಶೆಯ ವಾತಾವರಣದಲ್ಲಿದ್ದ ಕನ್ನಡಿಗರಿಗೆ ಅದರ ಸವಿಯುಣಿಸಿದ ಶ್ರೀ ರಾಮಾಯಣ ದರ್ಶನಂ ಮಹಾಕಾವ್ಯ ಈ ಮಹಾಕವಿಯಿಂದ ಸೃಜಿತವಾಯ್ತು.

ವೈಚಾರಿಕತೆಯ ನೆಲೆಗಟ್ಟಿನ ಮೇಲೆ ತುಂಬು ಶ್ರದ್ಧೆಯಿಂದ ಸೃಷ್ಟಿಯಾದ ಕುವೆಂಪು ಸಾಹಿತ್ಯದಲ್ಲಿ ತೀಕ್ಷ್ಣವಾದ ಪ್ರಖರವಾದ ಸಾಮಾಜಿಕ ಕಳಕಳಿಯನ್ನು ಕಾಣಬಹುದು. ಪರಂಪರೆ ಮತ್ತು ಆಧುನಿಕತೆಗಳೆರಡರ ಸಮನ್ವಯವನ್ನು ಸಾಧಿಸಿ ಸೈದ್ಧಾಂತಿಕ ನೆಲೆಗಟ್ಟಿನ ಮೇಲೆ ಬದುಕಿನೊಳಗಣ ಸತ್ಯಗಳಿಗೆ ಜೀವನದುದ್ದಕ್ಕೂ ಪ್ರತಿಸ್ಪಂದಿಸುತ್ತಾ ಬಂದಿರುವ ಕುವೆಂಪು ಅವರಲ್ಲಿ ಈ ಸಾಮಾಜಿಕ ಪ್ರಜ್ಞೆ ಆಳವಾದದ್ದು.

ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ಭದ್ರವಾದ ನೆಲೆಯನ್ನೊದಗಿಸಿ ೧೦ನೇ ಶತಮಾನವನ್ನು ಸುವರ್ಣ ಯುಗವನ್ನಾಗಿಸಿದ ಮಹಾನ್ ಕವಿ ಪಂಪ ಬರೆದದ್ದು ಎರಡೇ ಕೃತಿಗಳಾದರೂ ಅಭೂತಪೂರ್ವ ಸಾಹಿತ್ಯ ಸಾಧನೆ ಮಾಡಿದವನು. ಇದೇ ರೀತಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ತನ್ನ ವೈವಿಧ್ಯಮಯ ಸಾಹಿತ್ಯ ಕೃತಿಗಳ ಮೂಲಕ ಸಂವೃದ್ಧಿಗೊಳಿಸಿದ ಅಸಾಮಾನ್ಯ ಪ್ರತಿಭೆ ಕುವೆಂಪು.

ಪಂಪ ರಾಜಾಶ್ರಯದಲ್ಲಿದ್ದು ರಾಜನ ಹಂಗನ್ನು ಪ್ರಶ್ನಿಸಿದರೆ ರಾಜರ ಆಹ್ವಾನವನ್ನು ತಿರಸ್ಕರಿಸಿದ ವಿಚಾರವಾದಿ ಕುವೆಂಪು ಮಾರ್ಗಕವಿಯಾದ ಪಂಪ ಸಾರ್ವಕಾಲಿಕ ಸಾಮಾಜಿಕ ಸತ್ಯವನ್ನು ತನ್ನ ಕಾವ್ಯ ಕೃತಿಗಳಲ್ಲಿ ಪ್ರತಿಪಾದಿಸಿ ‘ಮಾನವ ಜಾತಿ ತಾನೊಂದೆ ವಲಂ’ ಎಂಬ ಜಾತ್ಯಾತೀತ ಧೋರಣೆಯ ನಿಲ್ಲುವನ್ನು ತಳೆದಿದ್ದವನು.

ಇಂತಹದ್ದೆ ನಿಲುವು ತಳೆದಿದ್ದ ದಾರ್ಶನಿಕ ಕವಿ ಕುವೆಂಪು. ‘ಮನುಜ ಮತ ವಿಶ್ವ ಪಥ’ ಎಂದು ವಿಶ್ವಮಾನವತ್ವಕ್ಕೆ ಕರೆ ನೀಡಿದ ಇವರ ಪ್ರಭಾವಳಿ ನವೋದಯವನ್ನು ದಾಟಿ ಹೊಸಗನ್ನಡದ ಇತರ ಪ್ರಕಾರಗಳಿಗೂ ಪ್ರಸರಿಸಿತು. ಇಷ್ಟೇ ಅಲ್ಲದೆ ಮಹಾಕಾವ್ಯ ಶಕೆಯನ್ನು ಅಸದೃಶವಾಗಿ ರೂಪಿಸಿ ೨೦ನೇ ಶತಮಾನದ ಎಲ್ಲ ಪ್ರಗತಿಪರ ಚಿಂತನೆಗಳ ಮೂಲ ಸೆಲೆಯಾದವರು.

ಒಟ್ಟಾರೆ “ಕುವೆಂಪು ರವರ ಸಾಹಿತ್ಯ ಲಿಂಗಾತೀತ, ವರ್ಗಾತೀತ, ಜಾತ್ಯಾತೀತವಾದ ಸರ್ವ ಸಮಾನತೆಯನ್ನು ಸಾರುವಂಥ ವಿಶ್ವಮಾನವತೆಯ ಸಂದೇಶದ ಮೂಲಕ ಬರೆದದ್ದಕ್ಕೆಲ್ಲ ಸಾಮಾಜಿಕ ಚಿರಂತನ ಮೌಲ್ಯ ಸಿದ್ಧಿಸಿಕೊಂಡಿದ್ದು ಗಮನಾರ್ಹ”[೨]

‘ಕೊನೆಗೊಂಡಿತು ಓರೋರ್ವರ ಗರ್ವದ ಕಾಲ ಇದು ಸರ್ವರ ಕಾಲ’ ಎನ್ನುವ ಶ್ರೀ ಸಾಮಾನ್ಯನ ದೀಕ್ಷಾಗೀತೆಯು ಕುವೆಂಪು ಅವರು ಜನ ಸಾಮಾನ್ಯರಿಗೆ ದೊರಕಿಸಿಕೊಟ್ಟ ಸಾಮಾಜಿಕ ಉಯಿಲು, ಮಕ್ಕಳಿಂದ ವೃದ್ಧರವರೆಗೆ ಎಲ್ಲ ವಯಸ್ಸಿನವರನ್ನು ಸೂಜಿಗಲ್ಲಿನಂತೆ ಸೆಳೆಯುವ ಕುವೆಂಪು ಸಾಮಾಜಿಕ ಚಿಂತನೆ, ವೈಚಾರಿಕ ಮನೋಧರ್ಮವನ್ನು ಬಿತ್ತರಿಸಲು ಮುಖ್ಯವಾಗಿ ಅಪೇಕ್ಷಿಸಿದ್ದು ಯುವಕರು ಮತ್ತು ವಿದ್ಯಾರ್ಥಿಗಳನ್ನು ಆದುದರಿಂದಲೇ ವಿದ್ಯಾರ್ಥಿಗಳು ಭತ್ತ ತುಂಬುವ ಕಣಜಗಳಾಗದೆ,ಭತ್ತ ಬೆಳೆಯುವ ಗದ್ದೆಗಳಾಗಬೇಕೆಂದು ಕರೆ ನೀಡಿದರು.

ಕುವೆಂಪುರವರ ಸಾಹಿತ್ಯಕ್ಕೆ ಮೂಲಪ್ರೇರಣೆ ಪ್ರಕೃತಿ. ಇದೇ ಅವರ ಆರಾಧ್ಯ ದೈವವಾಗಿದ್ದು ಇಲ್ಲೆ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡವರು. ನೂರಾರು ಮತಧರ್ಮಗಳು ಒಟ್ಟಿಗೆ ಸಮಾನ ಎನ್ನುವ ಮೂಲಕ ಪುರೋಹಿತ ಶಾಹಿಯನ್ನು ನೇರವಾಗಿ ಟೀಕಿಸುತ್ತಾ ಸಂಸ್ಥಾಪಿತವಾದ ಹುಸಿ ಸತ್ಯಗಳನ್ನು ಪರ್ಯಾಯಗಳನ್ನು ಸೃಷ್ಟಿಸುವ ಮೂಲಕ ಅಲ್ಲಗಳೆದರು.

ಹೀಗೆ ಸ್ಥಾಪಿತ ಸತ್ಯಗಳಿಗೆ ಸಡ್ಡು ಹೊಡೆದು ಹೊಸ ಹೊಸ ದೃಷ್ಟಿಕೋನಗಳಿಂದ ಸಮಾಜದ ಆರೋಗ್ಯಕರ ಬೆಳವಣಿಗೆಗೆ ಸದಾ ದುಡಿದವರು. ಅರ್ಜುನ ದ್ರೋಣರನ್ನು ಏಕಲವ್ಯನಿಗೆ ಎದುರಾಗಿಸಿ ಕಾಡಸಂಸ್ಕೃತಿಯ ಮುಂದೆ ನಾಡಸಂಸ್ಕೃತಿಯನ್ನು ಅಲ್ಲಗಳೆಯುವ ಪರಿ ಬೆರಳ್ಗೆಕೊರಳ್ ನಾಟಕದಲ್ಲಿ; ಆಳುವವರ, ಭೂಮಾಲೀಕರ ವಿರುದ್ಧ ಶೋಷಕರು ನಡೆಸುವ ಸಂಘರ್ಷವನ್ನು ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು ಕಾದಂಬರಿಗಳಲ್ಲಿ; ಪುರೋಹಿತಶಾಹಿ ವಿರುದ್ಧ ಶೂದ್ರರ ವಿಜಯವನ್ನು ಶೂದ್ರ ತಪಸ್ವಿ ನಾಟಕದಲ್ಲಿ; ದೈವ ಪಾರಮ್ಯಕ್ಕೆ ಮುಖಾಮುಖಿಯಾಗಿ ಕಾಯಕ ಪಾರಮ್ಯವನ್ನು ‘ಜಲಗಾರ’ ನಾಟಕದಲ್ಲಿ ಪರಿಣಾಮಕಾರಿಯಾಗಿ ಬಿಂಬಿಸಿದ್ದಾರೆ.

ಒಟ್ಟಾರೆ ಕುವೆಂಪುರವರ ವೈಚಾರಿಕ ಮತ್ತು ಸಾಮಾಜಿಕ ಕಳಕಳಿ ಮಹಾಕಾವ್ಯ ‘ಶ್ರೀ ರಾಮಾಯಣ ದರ್ಶನಂ’ ನಿಂದ ಮೊದಲುಗೊಂಡು ಕಾದಂಬರಿಗಳೂ, ನಾಟಕಗಳೂ, ಕವನಗಳು, ವಿಮರ್ಶಾ ಲೇಖನಗಳಲ್ಲಿ ಸಶಕ್ತವಾಗಿ ನಿರೂಪಿತವಾಗಿರುವುದನ್ನು ಕಾಣಬಹುದು.

ಅಡಿ ಟಿಪ್ಪಣಿ:

೧. ಪ್ರೊ||ಸೋಮಶೇಖರಗೌಡ: ಕುವೆಂಪು: ಅನುಸಂಧಾನ: ಪುಟಸಂಖ್ಯೆ: ೪೧
೨. ಅದೇ ಪುಟಸಂಖ್ಯೆ ೪೪

# ೩. 'ಮಲೆಗಳಲ್ಲಿ ಮದುಮಗಳು': ವಸ್ತು ವಿಶ್ಲೇಷಣೆ

"ಇಲ್ಲಿ ಯಾರೂ ಮುಖ್ಯರಲ್ಲ

ಯಾರೂ ಅಮುಖ್ಯರಲ್ಲ

ಯಾವುದೂ ಯಃಕಶ್ಚಿತವಲ್ಲ"೧

ಎಂದು ಹೇಳಿ ಕಾದಂಬರಿ ಎಂಬುದು ಕರತಲರಂಗಭೂಮಿ ಎಂಬ ಪರಿಕಲ್ಪನೆಯನ್ನು ನಿಚ್ಚಳವಾಗಿಸಿದ ಮಹಾನ್ ಕಾದಂಬರಿ 'ಮಲೆಗಳಲ್ಲಿ ಮದುಮಗಳು' ಮಲೆನಾಡು ಪ್ರದೇಶದ ಜನಜೀವನದ ಸೂಕ್ಷ್ಮಾತಿಸೂಕ್ಷ್ಮವಾದ ಅಂಶಗಳಿಂದ ಮೊದಲುಗೊಂಡು ಆ ಜೀವನದ ಪ್ರಭಾವಿ ಲಕ್ಷಣಗಳನ್ನು ಕಾದಂಬರಿ ಒಳಗೊಂಡಿದೆ ಎಂದರೆ ಹೊಗಳಿಕೆಯ ಮಾತಾಗದು, ಮಲೆನಾಡು ಪ್ರದೇಶದ ಗಂಡು-ಹೆಣ್ಣಿನ ಪರಸ್ಪರ ಪ್ರೇಮ-ಪ್ರಣಯ, ಮದುವೆಯ ಪ್ರಸಂಗಗಳನ್ನು ಚಿತ್ರಿಸುವುದು ಆ ಪ್ರಕ್ರಿಯೆಯಲ್ಲಿ ಎದುರಾದ ಕಷ್ಟ-ಸುಖ, ಸೋಲು-ಗೆಲುವುಗಳಲ್ಲಿ ಪ್ರತಿಬಿಂಬಿಸುವುದು ಕಾದಂಬರಿಯ ಚೌಕಟ್ಟಿನಲ್ಲಿ ನಡೆಯುತ್ತದೆ ಅದರಲ್ಲೂ ಆ ಪ್ರದೇಶದ ಹೆಣ್ಣಿನ ಮತ್ತು ಕೆಳವರ್ಗದ ಜನರ ಪರಿಸ್ಥಿತಿಯನ್ನು ಪ್ರತಿಬಿಂಬಿಸುವತ್ತಾ ಕುವೆಂಪು ಅವರ ಬರವಣಿಗೆ ವಿಶಿಷ್ಟತೆಯನ್ನು ಪಡೆಯುತ್ತದೆ.

ಆದರೆ ಇದಿಷ್ಟನ್ನೇ ಕಾದಂಬರಿಯ ಹಾಗೂ ಲೇಖಕರ ಉದ್ದೇಶ ಎಂದು ಗ್ರಹಿಸುವುದಾದರೆ ಈ ಕಾದಂಬರಿಯ ಮಹತ್ವವನ್ನು ಅರಿತಂತಾಗುವುದಿಲ್ಲ. "ಲೇಖಕರು ಮಲೆನಾಡು ಪ್ರದೇಶದ ದೈನಂದಿನ ಕ್ರಿಯೆ, ಹಾಗೂ ಅಲ್ಲಿನ ತಾತ್ವಿಕ ಬದುಕಿನ ಸಮಗ್ರತೆಯನ್ನು ತನ್ನ ಅರಿವನ್ನಾಗಿ ಮಾಡಿಕೊಂಡು ತುಂಬ ಕಲಾತ್ಮಕವಾಗಿ ಅದನ್ನು ಅಭಿವ್ಯಕ್ತಿಸುವಲ್ಲಿ ಇವರ ವಿಶೇಷತೆಯಿದೆ. ಎಲ್ಲಕ್ಕಿಂತ ಮಿಗಿಲಾಗಿ ಈಗಾಗಲೇ ಆಳವಾಗಿ ಬೇರು ಬಿಟ್ಟಿರುವ ಒಂದು ವ್ಯವಸ್ಥೆಯ ಬುಡಕ್ಕೆ ಕೊಡಲಿ ಪೆಟ್ಟು ಕೊಟ್ಟು, ಅದನ್ನು ಸಂಸ್ಕರಿಸಲೆತ್ನಿಸುವ ಲೇಖಕರ ಬೌದ್ಧಿಕ ಮಹತ್ತು ಇಡೀ ಕಾದಂಬರಿಯಲ್ಲಿ ಒಳಸೂತ್ರವಾಗಿ ಕಾರ್ಯ ನಿರ್ವಹಿಸಿದೆ."೨

ಕುವೆಂಪು ಮಲೆನಾಡಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕನ್ನು ಕಾದಂಬರಿಯಲ್ಲಿ ಸಮಗ್ರವಾಗಿ ಅನಾವರಣ ಮಾಡಿದ್ದಾರೆ. ಮಲೆನಾಡಿನ ಜೀವನ ಚಿತ್ರವನ್ನು ಅದರೆಲ್ಲ ಚೆಲುವು ಮತ್ತು ವಿಕಾರಗಳಲ್ಲಿ ಸೂಕ್ಷ್ಮವಾಗಿ ಕಟ್ಟಿಕೊಡುವ ಕುವೆಂಪು ನೋಟದಲ್ಲಿ ಕೇವಲ ಮುಗ್ಧತೆ ರಮ್ಯತೆಗಳಿಲ್ಲ. ಮಲೆನಾಡಿನ ಜೀವನದ ಸರಳ ಸೌಂದರ್ಯವನ್ನು ವರ್ಣಿಸುತ್ತಲೆ ಕಾದಂಬರಿಯು ಅದರೊಳಗೆ ಅಡಗಿರುವ ರೂಕ್ಷತೆ, ಹಿಂಸೆ ಮತ್ತು ಕ್ರೌರ್ಯಗಳನ್ನು ಎತ್ತಿತೋರಿಸುವ ಮೂಲಕ ಹಳೆಯ ಮತ್ತು ಹೊಸ ಜಗತ್ತಿನ ಸಂಘರ್ಷವನ್ನು ಪರಿಣಾಮಕಾರಿಯಾಗಿ ನಿರೂಪಿಸುತ್ತದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯ ಕಲಾವಿದ ಕುವೆಂಪು 'ಕಾನೂರು ಹೆಗ್ಗಡತಿ'ಯ ಕಲಾವಿದನಿಗಿಂತ ಹೆಚ್ಚು ಆಳವಾದ ಚಿಂತನೆಯುಳ್ಳವರು. "ಕಾದಂಬರಿಯ ಬಂಧವನ್ನು ನಿಯಂತ್ರಿಸುವ ಯಾವ ಕೇಂದ್ರ ಪಾತ್ರವೂ ಇಲ್ಲಿಲ್ಲ."೩ ಕಾದಂಬರಿಗೆ ಒಂದೇ ಕೇಂದ್ರವೆಂಬುದಾಗಲಿ, ಕೇಂದ್ರ ಪ್ರಜ್ಞೆಯಾಗಲಿ, ಕೇಂದ್ರ ಪಾತ್ರವಾಗಲಿ ಇಲ್ಲ. ಮುಕುಂದಯ್ಯನಿಗಿರುವಷ್ಟೆ ಪ್ರಾಮುಖ್ಯತೆ ಗುತ್ತಿ ಐತರಿಗೂ ಇದೆ. ಅಂದರೆ ಕಾದಂಬರಿಯಲ್ಲಿ ಪಾತ್ರಗಳು ಹೆಚ್ಚು ಚಲನಶೀಲವಾಗಿವೆ.

ಕಾದಂಬರಿಯು ಎಲ್ಲ ಮನುಷ್ಯ ವ್ಯಾಪಾರಗಳನ್ನು ಪ್ರಕೃತಿಯ ನಿತ್ಯ ನಿರಂತರತೆಯಲ್ಲಿ ಆಯಾಮಗಳಲ್ಲಿ ಕಾಲಾತೀತ, ದೇಶಾತೀತ ಸ್ತರಗಳಲ್ಲಿ ಕಾಣಲು ಯತ್ನಿಸುತ್ತದೆ. ಬದುಕನ್ನು ಯಥಾವತ್ತಾಗಿ ನೋಡುವ ಅನುಭವಿಸುವ ಕಲೆಯಾಗಿ ರೂಪಿಸುವ ಪ್ರಾಮಾಣಿಕ ಪ್ರಯತ್ನ ಮಾಡುತ್ತದೆ. ಆ ಮೂಲಕ ವೈವಿಧ್ಯಮಯವೂ, ವಿಚಾರ ಪೂರ್ಣವೂ, ಸತ್ಯಪರವೂ ಆದ ಕಾದಂಬರಿಯಾಗಿ ರೂಪುಗೊಂಡಿದೆ.

'ಮಲೆಗಳಲ್ಲಿ ಮದುಮಗಳು' ಕಾದಂಬರಿ ರಚನೆಯ ಕಾಲ ಸ್ವಾತಂತ್ರ್ಯ ನಂತರವಾದರೂ, ಇಡೀ ಕಥನ ನಡೆಯುವುದು ವಸಾಹತು ಸಂಸ್ಕೃತಿಯು ಪ್ರಾದೇಶಿಕ ಹಾಗೂ ರಾಷ್ಟ್ರೀಯ ಬದುಕಿನಲ್ಲಿ ನೆಲೆ ಊರುತ್ತಿದ್ದ ಕಾಲದಲ್ಲಿ. ಹೀಗಾಗಿ ರಾಷ್ಟ್ರ ಹಾಗೂ ಸ್ಥಳೀಯ ವ್ಯಷ್ಟಿ ಮತ್ತು ಸಮಷ್ಟಿ ಬದುಕಿನ ಬದಲಾವಣೆಗಳಿಗೆ ಕಾರಣವಾಗುತ್ತಿರುವ ಸಾಮಾಜಿಕ, ರಾಜಕೀಯ ಸಂಗತಿಗಳು ಕಾದಂಬರಿ ಉದ್ದಕ್ಕೂ ಬರುವುದನ್ನು ಕಾಣುತ್ತೇವೆ.

ಬ್ರಿಟಿಷ್ ಆಳ್ವಿಕೆಯ ಸಂದರ್ಭದಲ್ಲಿ ಕ್ರಿಶ್ಚಿಯನ್ ಪಾದ್ರಿಗಳು ತಂದ ಸ್ಕೂಲ್, ಬೈಬಲ್, ಆಸ್ಪತ್ರೆ, ಬೈಸಿಕಲ್ಲು, ಲಾಟೀನು,ಮಲೆನಾಡಿಗೆ ಪ್ರವೇಶಿಸಿ ಜನರ ಬದುಕಿನಲ್ಲಿ ಹೊಸ ವಿಸ್ಮಯಗಳನ್ನು ಹುಟ್ಟು ಹಾಕಿದ ಕಾಳಜಿಗಳು ಕಾದಂಬರಿಯಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತವೆ.

ಈ ಎಲ್ಲ ಅಂಶಗಳ ಜೊತೆಗೆ ಬ್ರಿಟಿಷರ ವಸಾಹತುಶಾಹಿ ನೀತಿಯ ಪರಿಣಾಮವೆಂದರೆ ಮತಾಂತರ ಪ್ರಕ್ರಿಯೆ. ೧೯ನೇ ಶತಮಾನದ ಉತ್ತರಾರ್ಧದಲ್ಲಿ ತಮ್ಮ ಕಾಲೋನಿಯೊಂದರ ಯಃಕಶ್ಚಿತ್ ಮಲೆನಾಡಿನ ಪರಿಸರದಲ್ಲಿ ಹೇಗೆ ಮತಾಂತರ ಪ್ರಕ್ರಿಯೆ ಮುಖೇನ ಬ್ರಿಟಿಷ್ ಸಾಮ್ರಾಜ್ಯಶಾಹಿ ಸಂಸ್ಕೃತಿಯನ್ನು ನೆಲೆಯೂರಿಸಲು ತಂತ್ರಗಳನ್ನು ರೂಪಿಸುತ್ತಿತ್ತು ಎಂಬುದನ್ನು ಕಾದಂಬರಿ ಸಮರ್ಥವಾಗಿ ನಿರೂಪಿಸಿದೆ.

ಮತಾಂತರದ ಹಿಂದಿರುವ ಬ್ರಿಟಿಷರ ಕುತಂತ್ರಗಳ ಬಗೆಗೆ ತೀವ್ರವಾಗಿ ವಿರೋಧಿಸಿದಂತೆ ಸ್ಥಳೀಯ ಧಾರ್ಮಿಕ ಸಂಸ್ಥೆಗಳ ಬಗೆಗೂ ಕಾದಂಬರಿಯಲ್ಲಿ ತೀವ್ರ ಖಂಡನೆ ಇದೆ. ಶೂದ್ರರಲ್ಲಿದ್ದ ಅಜ್ಞಾನ, ಅವಿವೇಕ, ಅನಾಚಾರ, ಮೂಢನಂಬಿಕೆಗಳನ್ನು ಸ್ಥಳೀಯ ಧಾರ್ಮಿಕ ವ್ಯವಸ್ಥೆ ತನ್ನ ಲಾಭಕ್ಕಾಗಿ ಹೇಗೆ ಬಳಸಿಕೊಳ್ಳುತ್ತಿತ್ತು ಎಂಬುದು ಕಾದಂಬರಿಯಲ್ಲಿ ನಿರೂಪಿತವಾಗಿದೆ. ಪುರೋಹಿತಶಾಹಿ ವ್ಯವಸ್ಥೆ ಶೂದ್ರರನ್ನು ಶಿಕ್ಷಣದಿಂದ ವಂಚಿತರವನ್ನಾಗಿ ಮಾಡಿದ ಅನೈತಿಕ ಮತ್ತು ಅಮಾನವೀಯತೆಯ ಬಗೆಗೆ ಕಾದಂಬರಿಕಾರರಿಗೆ ಆಕ್ರೋಶವಿದೆ. ಅಷ್ಟೇ ಅಲ್ಲದೆ ಪುರೋಹಿತಶಾಹಿ ವ್ಯವಸ್ಥೆ ಎಸಗಿದ ಅಪರಾಧಗಳಿಂದ ಮತ್ತು ಶತಶತಮಾನಗಳಿಂದ ಭರತ ಭೂಮಿಯ ಸಾಮಾನ್ಯ ಜನಕ್ಕೆ ಒದಗಿದ ದುರ್ಗತಿಗಳನ್ನು ಕಂಡ ಕಾದಂಬರಿಕಾರರ ಸಂವೇದನೆಯು ಮತೀಯ ಮೌಢ್ಯತೆಗೆ ವೈಜ್ಞಾನಿಕ ಪ್ರಜ್ಞೆಯನ್ನು ಆಧ್ಯಾತ್ಮಿಕತೆಯನ್ನು ಬೋಧಿಸುವುದರೊಂದಿಗೆ ಜನತೆಯಲ್ಲಿ ಹೊಸ ಎಚ್ಚರವನ್ನು ಉಂಟುಮಾಡುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದೆ.

ಕಾದಂಬರಿಯ ನಲವತ್ತನೆ ಭಾಗ ಪುರೋಹಿತಶಾಹಿ ಬದುಕಿನ ಅನೇಕ ಚಿತ್ರಗಳನ್ನು ನಮ್ಮ ಮುಂದಿಡುತ್ತದೆ. ಬೆಟ್ಟಳ್ಳಿಯಿಂದ ಕಲ್ಲೂರಿಗೆ ಸತ್ಯನಾರಾಯಣ ಪೂಜೆಗಾಗಿ ಹೊರಟ ಕಲ್ಲಯ್ಯಗೌಡರ ಕುಟುಂಬದ ಅತ್ಯಂತ ಕಿರಿಯ ಪೀಳಿಗೆಯವರಾದ ತಿಮ್ಮು, ಕಾಡುವಿನ ಸಹಜ ಮುಗ್ಧ

ಸಂಭಾಷಣೆಯಲ್ಲಿ ವೈದಿಕ ಕುಟುಂಬಗಳ ಅನೇಕ ಆಚರಣೆಗಳು, ಬದುಕಿನ ರೀತಿ-ನೀತಿಗಳು ಇತರ ಕೆಳವರ್ಗಗಳಿಗಿಂತ ಭಿನ್ನವಾಗಿಯೂ ಹಾಸ್ಯಾಸ್ಪದವಾಗಿಯೂ ಚಿತ್ರಿಸಲ್ಪಟ್ಟಿವೆ. ಗ್ರಾಮೀಣ ಮಕ್ಕಳ ಕುತೂಹಲದಿಂದ ಕೂಡಿದ ವೀಕ್ಷಣೆಯಿಂದ ವೈದಿಕ ಕುಟುಂಬಗಳ ಬದುಕಿನ ಅನೇಕ ರೀತಿ-ನೀತಿಗಳನ್ನು ಮುಖಾಮುಖಿಯಾಗಿಸಿ ವ್ಯಂಗ್ಯಕ್ಕೆ ಗುರಿಪಡಿಸುವ ಪ್ರಕ್ರಿಯೆಯಲ್ಲಿ ಪುರೋಹಿತಶಾಹಿ ಬಗೆಗಿನ ಪ್ರತಿರೋಧ ಪರಿಣಾಮಕಾರಿಯಾಗಿ ವ್ಯಕ್ತವಾಗಿದೆ.

"ಕಾದಂಬರಿಯ ವಸ್ತು, ಸಂವಿಧಾನ, ದೃಷ್ಟಿ, ಅಭಿವ್ಯಕ್ತಿ ವಿಧಾನ, ಬಳಸಿರುವ ಭಾಷೆ ಎಲ್ಲವೂ ವೈವಿಧ್ಯಮಯ, ಮಲೆನಾಡು ಪ್ರದೇಶದ ಜನತೆ, ಅವರ ಜೀವನ, ಆಚಾರ-ವಿಚಾರ, ಉಡುಗೆ-ತೊಡುಗೆ ಮೊದಲಾದವನ್ನು ಚಿತ್ರಿಸುವುದು ಮಾತ್ರ ಲೇಖಕರ ಉದ್ದೇಶವಲ್ಲ. ಆ ಮೂಲಕ ಕನ್ನಡ ನಾಡಿನ ವ್ಯವಸ್ಥೆಯನ್ನು ನಿರೂಪಿಸುವ ಪ್ರಯತ್ನವಿದೆ. ಸಜೀವಯುಕ್ತ ಜೀವನ ಮತ್ತು ಸಂಸ್ಕೃತಿಯ ಸಂಸ್ಥಾಪನೆಯೇ ಕಾದಂಬರಿಯ ಉದ್ದೇಶ, ಭಿನ್ನಜಾತಿ, ಭಿನ್ನವರ್ಗ, ಸಂಸ್ಕೃತಿಗಳಲ್ಲಿನ ಗುಣಾತ್ಮಕ ಬದುಕಿನ ಸ್ತರಗಳನ್ನು ಗುರುತಿಸಿ ಬೆಸೆಯುವ ಕ್ರಿಯೆ ಕಾದಂಬರಿಯಲ್ಲಿ ನಿರಂತರವಾಗಿ ಸಾಗುತ್ತದೆ."[೪]

ಇಷ್ಟೇ ಅಲ್ಲದೆ ಅಶಾಂತಿಯ ಮೌನ ಸಂಘರ್ಷದ ಜ್ವಾಲಾಮುಖಿಗಳು ಕಾದಂಬರಿಯ ಮುಖ್ಯ ಸತ್ವ. ಪ್ರತಿಯೊಂದು ಘಟನೆಯೂ ಇಲ್ಲಿ ವರ್ಗ ಸಂಬಂಧಗಳ ಹಿನ್ನೆಲೆಯಲ್ಲಿಯೇ ನಡೆಯುತ್ತದೆ. ಜಮೀನುದಾರ ವರ್ಗದ ವಿವಿಧ ರೀತಿಯ ಹಿಂಸೆಗಳೇ ಇಲ್ಲಿಯ ಮುಖ್ಯ ಘಟನೆಗಳಿಗೆ ಕಾರಣ. ಎಲ್ಲಕ್ಕಿಂತ ಹೆಚ್ಚಾಗಿ ಇಲ್ಲಿ ಲುಂಗಿಸಾಬಿ, ಇಜಾರದ ಸಾಬಿ, ಅಜ್ಜು ಸಾಬು ಮುಂತಾದ ಭೂ ಮಾಲೀಕ ವರ್ಗದ ಗೂಂಡಾಪಡೆಯೂ ಇದೆ. ಇದರ ವಿರುದ್ಧ ಜೀತವರ್ಗದವರ, ಕೆಳಜಾತಿಯವರ ಉಗ್ರ ಪ್ರತಿಭಟನೆಯೂ ಇದೆ. ಅಲ್ಲದೆ ಜಾತಿಪದ್ಧತಿಯ ತೆಕ್ಕೆಯಿಂದ ಬಿಡಿಸಿಕೊಳ್ಳಲು ಬ್ರಾಹ್ಮಣೇತರ ಜಾತಿಗಳು ನಡೆಸುತ್ತಿದ್ದ ಪ್ರಯತ್ನದ ಚಿತ್ರಣವೂ ಮಾರ್ಮಿಕವಾಗಿ ನಿರೂಪಿತವಾಗಿದೆ.

ಎಲ್ಲಕ್ಕಿಂತ ಮಿಗಿಲಾಗಿ ಈಗಾಗಲೇ ಆಳವಾಗಿ ಬೇರುಬಿಟ್ಟಿರುವ ಒಂದು ವ್ಯವಸ್ಥೆಯ ಬುಡಕ್ಕೆ ಕೊಡಲಿ ಪೆಟ್ಟು ಕೊಟ್ಟು ಅದನ್ನು ಸಂಸ್ಕರಿಸಲೆತ್ನಿಸುವ ಲೇಖಕರ ಬೌದ್ಧಿಕ ಮಹತ್ತು ಇಡೀ ಕಾದಂಬರಿಯಲ್ಲಿ ಒಳಸೂತ್ರವಾಗಿ ಕಾರ್ಯನಿರ್ವಹಿಸಿದೆ.

ಅಡಿ ಟಿಪ್ಪಣಿ :

೧. ಕುವೆಂಪು : ಮಲೆಗಳಲ್ಲಿ ಮದುಮಗಳು
೨. ಪ್ರಬುದ್ಧ ಕರ್ನಾಟಕ : ಲೇಖನ ಪಿ.ಬೆಟ್ಟೇಗೌಡ- ಮಲೆಗಳಲ್ಲಿ ಮದುಮಗಳು ಒಂದು ಪಕ್ಷಿನೋಟ : ಪುಟಸಂಖ್ಯೆ: ೨೦
೩. ಡಿ.ಆರ್.ನಾಗರಾಜು : ಅಮೃತ ಮತ್ತು ಗರುಡ- ಪುಟಸಂಖ್ಯೆ- ೨೨
೪. ಅದೇ ಪುಟಸಂಖ್ಯೆ-೨೩

# ೪. ಭಾರತದಲ್ಲಿ ಜಾತಿ ಪದ್ಧತಿ

ವರ್ಣ ವ್ಯವಸ್ಥೆಯು ಪ್ರಾಚೀನ ಭಾರತದಲ್ಲಿ ಮುಖ್ಯವಾಗಿ ವೇದಗಳು ಹಾಗೂ ಧರ್ಮಶಾಸ್ತ್ರಗಳ ಕಾಲದಲ್ಲಿ ಅಸ್ತಿತ್ವದಲ್ಲಿದ್ದಂತಹ ಶ್ರೇಣೀಕೃತ ವ್ಯವಸ್ಥೆಯಾಗಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ವರ್ಣಗಳನ್ನು ಪರಮಾತ್ಮನೇ ಗುಣ ಹಾಗೂ ಕರ್ಮದ ಆಧಾರದ ಮೇಲೆ ಸೃಷ್ಟಿಸಿದ್ದಾನೆ ಎಂಬ ನಂಬಿಕೆ ಹಿಂದೂಗಳದ್ದು. ವರ್ಣದ ಉಗಮಕ್ಕೆ ಸಂಬಂಧಿಸಿದಂತೆ ಋಗ್ವೇದದ ಪುರುಷ ಸೂಕ್ತದಲ್ಲಿ ಹೀಗೆ ಹೇಳಿದೆ. "ವಿರಾಟ್ ಪುರಷನ ಮಹಾಶರೀರದ ಮುಖದಿಂದ ಬ್ರಾಹ್ಮಣನು, ಬಾಹುಗಳಿಂದ ಕ್ಷತ್ರಿಯನು, ತೊಡೆಗಳಿಂದ ವೈಶ್ಯನು ಮತ್ತು ಪಾದಗಳಿಂದ ಶೂದ್ರನೂ ಉತ್ಪತ್ತಿಯಾಗಿರುತ್ತಾರೆ"೧.

ಶ್ರಮವಿಭಜನೆಯ ತತ್ವದ ಹಿನ್ನೆಲೆಯಲ್ಲಿ ಪ್ರತಿ ವರ್ಣದ ಸದಸ್ಯರು ಕೈಗೊಳ್ಳಬೇಕಾದ ವೃತ್ತಿಯ ಸ್ಪಷ್ಟ ಕಲ್ಪನೆ ಇತ್ತು. ಉದಾ: ವಿರಾಟ್ ಪುರುಷನ ಬಾಯಿಯಿಂದ ಹೊರಹೊಮ್ಮಿದ ಬ್ರಾಹ್ಮಣರು ಅಧ್ಯಯನ ಅಧ್ಯಾಪನ ಮತ್ತು ಪೌರೋಹಿತ್ಯಗಳಲ್ಲಿಯೂ; ದೈಹಿಕ ಶಕ್ತಿ ಸಾಮರ್ಥ್ಯದ ಸಂಕೇತದಂತಿರುವ ಭುಜದಿಂದ ಉಗಮ ಹೊಂದಿದ ಕ್ಷತ್ರಿಯರು, ರಾಜ್ಯಾಡಳಿತ ಯುದ್ಧ ಮತ್ತು ವ್ಯಾಪಾರೋಧ್ಯಮಗಳಲ್ಲಿಯೂ, ಪಾದಗಳಿಂದ ಆವಿರ್ಭವಿಸಿದ ಶೂದ್ರರು ಉಳಿದ ವರ್ಣಗಳಿಗೆ ಸೇವೆ ಸಲ್ಲಿಸುವ ಕಾರ್ಯದಲ್ಲಿ ನಿರತರಾಗಿದ್ದಾರೆಂದು ಹೇಳಲಾಗಿದೆ. ಬಾಯಿ, ಭುಜ, ತೊಡೆ ಮತ್ತು ಪಾದ ಇವು ಬೇರೆ ಬೇರೆ ಕಾರ್ಯಗಳಿಗಾಗಿ ಸೃಷ್ಟಿಯಾದ ಬೇರೆ ಬೇರೆ ಅಂಗಗಳಾಗಿದ್ದರೂ ದೇಹದ ಸಂಪೋಷಣೆ, ರಕ್ಷಣೆ ಹಾಗೂ ಪರಿಪೂರ್ಣತೆಯ ದೃಷ್ಟಿಯಿಂದ ಪರಸ್ಪರ ಸಂಬಂಧ ಹೊಂದಿದ್ದು ಪೂರಕವಾಗಿವೆ. ಇದೇ ರೀತಿ ನಾಲ್ಕು ವರ್ಣಗಳು ಕಾರ್ಯದ ದೃಷ್ಟಿಯಿಂದ ಬೇರೆಯಾಗಿದ್ದರೂ ಸಾಮಾಜಿಕ ವ್ಯವಸ್ಥೆಯ ಪೂರ್ಣತೆಯ ದೃಷ್ಟಿ ಪರಸ್ಪರ ಸಂಬಂಧ ಹೊಂದಿದೆ.

ವೇದಗಳ ಕಾಲದಲ್ಲಿ ವರ್ಣವ್ಯವಸ್ಥೆ ಹೆಚ್ಚು ಸಂಕೀರ್ಣಗೊಳ್ಳದೆ ಸರಳವಾಗಿದ್ದಿತ್ತು. ಎಲ್ಲಾ ವರ್ಣಗಳನ್ನು ಸಮಾನವಾಗಿ ಕಾಣಲಾಗುತ್ತಿದ್ದು, ಅವುಗಳೊಳಗೆ ಸಾಮಾಜಿಕ ಚಲನೆ ಸಾಧ್ಯವಿತ್ತು. ಉಟೋಪಚಾರ ಹಾಗೂ ವಿವಾಹದ ವಿಚಾರಗಳಲ್ಲಿ ಹೆಚ್ಚು ನಿರ್ಬಂಧಗಳೂ ಇರಲಿಲ್ಲ.

ವೇದಗಳ ನಂತರದ ಕಾಲದಲ್ಲಿ ವರ್ಣ ವ್ಯವಸ್ಥೆಯಲ್ಲಿ ಪರಿವರ್ತನೆ ಆರಂಭವಾಯ್ತು. ವರ್ಣಗಳೊಳಗೆ ಕ್ಲಿಷ್ಟತೆ, ಕಾಠಿಣ್ಯ ತಲೆದೋರಿ 'ಮೇಲು-ಕೀಳು', 'ಉಚ್ಚ-ನೀಚ' ಎಂಬಂತಹ ಭಾವನೆಗಳು ಬಲಿಯತೊಡಗಿದವು. ವರ್ಣಭೇದತೆ ಆರಂಭವಾಯ್ತು. ನಾಲ್ಕು ವರ್ಣಗಳು ನಾಲ್ಕು ಪ್ರತ್ಯೇಕ ಜೀವನ ವಿಧಾನಗಳನ್ನು ಪ್ರತಿನಿಧಿಸುವಂತಾಯ್ತು. ಶೂದ್ರ ವರ್ಣದೊಡನೆ ಉಳಿದ ವರ್ಣಗಳ ವಿವಾಹ ಸಂಬಂಧವನ್ನು ಬೆಳೆಸುವುದರ ಬಗ್ಗೆ ನಿರ್ಬಂಧಗಳನ್ನು ಹೇರಲಾಯ್ತು. ಕಾಲಾಂತರದಲ್ಲಿ ಶೂದ್ರ ವರ್ಣದ ಮೇಲೆ ಇನ್ನೂ ಹೆಚ್ಚಿನ ನಿರ್ಬಂಧಗಳು ಹೇರಲ್ಪಟ್ಟವು. ವರ್ಣದ ಸದಸ್ಯತ್ವವು ಅನುವಂಶೀಯವಾಗ ತೊಡಗಿತು. ವರ್ಣಭೇದತೆ ಹಾಗೂ ನಿರ್ಬಂಧಗಳು ಹೆಚ್ಚುತ್ತಾ ಹೋದುದಲ್ಲದೆ ವರ್ಣಸಂಕರವಾಗತೊಡಗಿ ವರ್ಣವ್ಯವಸ್ಥೆಯ ಗರ್ಭದಿಂದಲೇ ಜಾತಿ ವ್ಯವಸ್ಥೆಯ ಉಗಮವಾಯ್ತು.

ವರ್ಣ ವ್ಯವಸ್ಥೆಯು ಜಾತಿ ವ್ಯವಸ್ಥೆಯಾಗಿ ರೂಪಾಂತರಗೊಂಡಾಗ ವರ್ಣದ 'ಮುಕ್ತ' ಸ್ವರೂಪ ಮಾಯವಾಗಿ ಅದೊಂದು ಬಗೆಯ 'ಮುಚ್ಚಿದ' ವ್ಯವಸ್ಥೆಯಾಯ್ತು. ಗುಣಾರ್ಹತೆ, ಸಾಧನೆ ಮತ್ತು ಆಚರಿಸುವ ಅನುಸರಿಸು ವೃತ್ತಿಯ ಬದಲು ವ್ಯಕ್ತಿಯ ಜನ್ಮವೇ ಸದಸ್ಯತ್ವವನ್ನು ನಿರ್ಧರಿಸುವ ನಿರ್ಣಾಯಕವಾದ ಮಾನದಂಡವಾಯ್ತು. ಸಂಸ್ಕೃತದಲ್ಲಿ 'ಜಾ' ಎಂಬುದಕ್ಕೆ ಹುಟ್ಟುವಿಕೆ ಎಂಬ ಅರ್ಥವಿದ್ದು 'ಜಾತಿ' ಎಂಬ ಶಬ್ಧವು ಹುಟ್ಟುವಿಕೆಯನ್ನು ಆಧರಿಸಿನಿಂತ ಸ್ತರವ್ಯವಸ್ಥೆಯಾಯ್ತು.

ಸಾಮಾಜಿಕ ಸ್ತರ ವಿನ್ಯಾಸದ ಒಂದು ರೂಪವಾಗಿರುವ ಜಾತಿ ಪದ್ಧತಿಯು ತನ್ನಲ್ಲಿ ವೈಶಿಷ್ಟ್ಯತೆಗಳೊಂದಿಗೆ ಭಾರತಕ್ಕೆ ಮಾತ್ರ ಸೀಮಿತವಾಗಿದೆ ಎನ್ನಬಹುದು. ತನ್ನ ಹುಟ್ಟು ಮತ್ತು ಬೆಳವಣಿಗೆಯ ದೃಷ್ಟಿಯಿಂದ ಸಂಪೂರ್ಣವಾಗಿ ದೇಶೀಯವೆನಿಸಿರುವ ಜಾತಿಯು ಭಾರತದ ಸಾಮಾಜಿಕ ಜೀವನದ ಅವಿಭಾಜ್ಯ ಅಂಗವಾಗಿದೆ. ಜಾತಿಗೆ ಸರಿಸಮಾನವಾದ ಪದ್ಧತಿಯು ಜಗತ್ತಿನ ಬೇರಾವ ದೇಶಗಳಲ್ಲಿಯೂ ಕಂಡು ಬರುವುದಿಲ್ಲ. ಆದಾಗ್ಯೂ ಈಜಿಪ್ಟ್, ಜಪಾನ್, ರೋಂ, ಬರ್ಮಾ, ಪರ್ಷಿಯಾ, ಸೈಬೀರಿಯಾ, ಪೆರಿ, ಈಸ್ಟ್ ಹಾರ್ನ್ ಮೊದಲಾದೆಡೆ ಜಾತಿಗೆ ಪರ್ಯಾಯವೆನಿಸಿದ ಪದ್ಧತಿಗಳು ಈಗಲೂ ಅಸ್ತಿತ್ವದಲ್ಲಿವೆ. ಭಾರತದಲ್ಲಿರುವ ಜಾತಿಯು ಹೊಂದಿರುವ ವೈಶಿಷ್ಟ್ಯಗಳೊಂದಿಗೆ ಅಷ್ಟು ವ್ಯಾಪಕವಾಗಿ, ಪ್ರಭಾವಿಯಾಗಿ ಪಸರಿಸಿರುವ ಪದ್ಧತಿಯು ಜಗತ್ತಿನ ಬೇರಾವ ಮೂಲೆಯಲ್ಲಿಯೂ ಇಲ್ಲವೆಂದು ನಿರ್ವಿವಾದವಾಗಿ ಹೇಳಬಹುದು.

'ಜಾತಿ' ಎಂಬ ಪದದ ಆಂಗ್ಲಾನುವಾದ 'ಕಾಸ್ಟ್.' 'ಕಾಸ್ಟ್' ಎಂಬುದು ಸ್ಪಾನಿಷ್ ಭಾಷೆಯ ಪದದಿಂದ ಬಂದಿದೆ. ಕಾಸ್ಟಾ ಎಂಬ ಪದಕ್ಕೆ ಜನಾಂಗ, 'ಉತ್ಪತ್ತಿಯತಳಿ', ಅನುವಂಶೀಯತೆ, ವಂಶಾನುಗತವಗಿ ಗುಣಗಳನ್ನು ಪಡೆದಿರುವ ಗುಂಪು ಎಂಬರ್ಥವಿದೆ. ಜಾತಿಯ ವಿವಿಧ ಲಕ್ಷಣಗಳಲ್ಲಿ ಅನುವಂಶೀಯತೆಗೆ ಹೆಚ್ಚು ಪ್ರಾಧಾನ್ಯವಿರುವುದು ಸ್ಪಷ್ಟವಾಗಿದೆ. ಭಾರತದ ಸಾಮಾಜಿಕ ವ್ಯವಸ್ಥೆಯಲ್ಲಿ ಕಂಡು ಬರುವ ಸಾಮಾಜಿಕ ಸಮೂಹಗಳನ್ನು 'ಕಾಸ್ಟ' ಎಂದು ಮೊದಲ ಬಾರಿಗೆ ಕರೆದವರು ಪೋರ್ಚುಗೀಸರು. ಅನಂತರ ಕಾಸ್ಟ್ ಪದ ಜನಪ್ರಿಯವಾಯ್ತು. ಜಾತಿ ಎಂಬ ಪದಕ್ಕೆ ವರ್ಣ ಎಂಬ ಪರ್ಯಾಯ ಪದವಿದೆ. 'ವರ್ಣ' ಎಂದರೆ 'ಬಣ್ಣ' ಎಂಬ ಅರ್ಥವಿದೆ. ಜನಾಂಗ, ವರ್ಣ ಮತ್ತು ಶ್ರಮವಿಭಜನೆ ಹಾಗೂ ಉದ್ಯೋಗಗಳು ಭಾರತದ ಜಾತಿ ಪದ್ಧತಿಯ ತಳಹದಿಯಾಗಿವೆ.

ಜಾತಿ ಪದ್ಧತಿಯ ಬೆಳವಣಿಗೆಗೆ ಭೌಗೋಳಿಕ ಪ್ರತ್ಯೇಕತೆ, ಧರ್ಮದ ಪ್ರಭಾವ, ಶಿಕ್ಷಣದ ಕೊರತೆ, ಗ್ರಾಮೀಣ ಸಮಾಜದ ರಚನೆ ಹಲವು ಜನಾಂಗಗಳ ಅಸ್ತಿತ್ವ, ರಾಜಕೀಯ ಅಂಶಗಳು ಕಾರಣವಾಗಿವೆ.

ಜಾತಿಯು ಸಾಮಾಜಿಕ ಸ್ತರವಿನ್ಯಾಸದ ಒಂದು ರೂಪವಾಗಿದ್ದು, ಏಣಿಶ್ರೇಣಿಗಳಿಂದ ಕೂಡಿದ ವ್ಯವಸ್ಥೆಯಾಗಿದೆ. ಹಿಂದೂ ಸಮಾಜವು ಜಾತಿ ಉಪಜಾತಿಗಳೆಂಬ ಅಸಂಖ್ಯಾತ ಸಮೂಹಗಳ ನ್ನೊಳಗೊಂಡಿದೆ. ಮೇಲು-ಕೀಳು, ಶ್ರೇಷ್ಠ-ಕನಿಷ್ಠ, ಪವಿತ್ರ-ಅಪವಿತ್ರ ಎಂಬ ಭಾವನೆಗಳ ಮೇಲೆ ಈ ವ್ಯವಸ್ಥೆ ರೂಪಿತವಾಗಿದೆ. ಜಾತಿಯ ಸಾಮಾಜಿಕ ಏಣಿ ಶ್ರೇಣಿಯಲ್ಲಿ ಬ್ರಾಹ್ಮಣರಿಗೆ ಅತ್ಯುನ್ನತ ಸ್ಥಾನವಿದ್ದರೆ ಅಸ್ಪೃಶ್ಯರಿಗೆ ಕೀಳು ಸ್ಥಾನವಿದೆ. ಹಿಂದೂ ಸಮಾಜವು ಹಲವು ಜಾತಿಗಳಾಗಿ

ವಿಂಗಡಿತವಾಗಿ ಪ್ರತಿಯೊಂದು ಜಾತಿಯು ತನ್ನದೆ ಆದ ನಿಶ್ಚಿತ ಜೀವನ ಮತ್ತು ಸಂಸ್ಕೃತಿಯನ್ನೊಂದಿದೆ. ಜಾತಿಯ ಸಮಾಜವು ಹುಟ್ಟಿನ ಆಧಾರದ ಮೇಲೆ ನಿರ್ಧರಿತವಾಗುತ್ತದೆ. ಒಬ್ಬನ ಅರ್ಹತೆ ಮತ್ತು ಪ್ರತಿಭೆ, ಸಾಮರ್ಥ್ಯ, ಹಾಗೂ ಸಾಧನೆಗಳಿಗಿಂತಲೂ ಆತನ ಹುಟ್ಟಿನಿಂದಲೇ ಜಾತಿಯ ಸದಸ್ಯತ್ವವು ನಿರ್ಧರಿತವಾಗುತ್ತವೆ.

ಜಾತಿ ಪದ್ಧತಿಯು ಊಟೋಪಚಾರ ಹಾಗೂ ಸಾಮಾಜಿಕ ಸಂಬಂಧಗಳ ಮೇಲೆ ನಿರ್ಬಂಧಗಳನ್ನು ಹೇರಿದೆ. ಸಾಮಾನ್ಯವಾಗಿ ಹಣ್ಣು, ಹಾಲು, ಬೆಣ್ಣೆ, ಒಣಗಿದ ಫಲ ಇತ್ಯಾದಿಗಳನ್ನು ಯಾರಾದರೂ, ಯಾರಿಂದಲಾದರೂ ಸ್ವೀಕರಿಸಬಹುದು. ಬೇಯಿಸಿದ ಆಹಾರವನ್ನು ಯಾವ ಜಾತಿಯವರು, ಯಾವ ಜಾತಿಯವರಿಂದ ಸ್ವೀಕರಿಸಬಹುದು ಎಂಬುದರ ಬಗ್ಗೆ ನಿಯಮಗಳಿವೆ. ಉತ್ತರ ಭಾರತದಲ್ಲಿ 'ಕಚ್ಚಾ ಆಹಾರ', 'ಪಕ್ಕಾ ಆಹಾರ' ಎಂದು ಎರಡು ವಿಧಗಳಿವೆ. ಕಚ್ಚಾ ಆಹಾರವು ನೀರಿನಿಂದ ತಯಾರಿಸಿದ್ದಾಗಿದ್ದರೆ ಪಕ್ಕಾ ಆಹಾರವು ತುಪ್ಪದಿಂದ ತಯಾರಿಸಿದ್ದುದಾಗಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮೊದಲಾದ ಮೇಲ್ಜಾತಿಯವರು ಶೂದ್ರರು ತಯಾರಿಸಿದ ಪಕ್ಕಾ ಆಹಾರವನ್ನು ಸೇವಿಸಬಹುದಾದರೂ ತಮ್ಮ ಜಾತಿಯವರನ್ನು ಬಿಟ್ಟು ಬೇರಾವ ಜಾತಿಯವರು ತಯಾರಿಸಿದ ಕಚ್ಚಾ ಆಹಾರವನ್ನು ಸೇವಿಸುವಂತಿಲ್ಲ. ಆದರೆ ಬ್ರಾಹ್ಮಣರು ತಯಾರಿಸಿದ ಯಾವುದೇ ರೀತಿ ಆಹಾರವನ್ನು ಕೂಡ ಸೇವಿಸಬಹುದು. ದಕ್ಷಿಣ ಭಾರತದಲ್ಲಿ ಕೆಳಜಾತಿಯವರು ಬೇಯಿಸಿದ ಯಾವುದೇ ಬಗೆಯ ಆಹಾರವನ್ನು ಸಾಮಾನ್ಯವಾಗಿ ಮೇಲ್ಜಾತಿಯವರು ಸ್ವೀಕರಿಸುವುದಿಲ್ಲ.

ಕೀಳು ಜಾತಿಯವರ ಸ್ಪರ್ಶವಿಲ್ಲದ ಅವರ ನೆರಳೂ ಕೂಡ ತಮ್ಮ ಮೇಲೆ ಬೀಳಬಾರದೆಂಬ ಭಾವನೆ ಉನ್ನತ ಜಾತಿಯವರಲ್ಲಿದೆ. ಹೀಗಾಗಿ ಕೆಳಜಾತಿಯವರು ಊರಿನ ಹೊರಗೆ ವಾಸಿಸಬೇಕಾದದ್ದು ಅನಿವಾರ್ಯವಾಗಿತ್ತು. ಊರನ್ನು ಪ್ರವೇಶಿಸುವಾಗಲೂ ಮಧ್ಯಾಹ್ನದ ವೇಳೆ ಅವರ ನೆರಳು ಅವರ ಕಾಲಡಿಯೇ ಬೀಳುವ ಸಂದರ್ಭದಲ್ಲಿ ಮಾತ್ರ ಪ್ರವೇಶಿಬೇಕಿತ್ತು. ಮೇಲ್ಜಾತಿಯವರೊಡನೆ ಮಾತನಾಡುವಾಗ ನಿರ್ದಿಷ್ಟ ಅಂತರವನ್ನು ಕಾಯ್ದುಕೊಳ್ಳುವುದು ಅನಿವಾರ್ಯವಾಗಿತ್ತು. ಅಸ್ಪೃಶ್ಯರಿಗೆ ಇತರ ಜಾತಿಯವರಂತೆ ಬೀದಿಯ ಮೇಲೆ ಉಗುಳುವ ಸ್ವಾತಂತ್ರ್ಯವೂ ಇರಲಿಲ್ಲ. ಉಗುಳಲು ಕುತ್ತಿಗೆಗೆ ಮಣ್ಣಿನ ಪಾತ್ರೆಯನ್ನು ತಗಲು ಹಾಕಿಕೊಂಡು ತಿರುಗಾಡಬೇಕಾಗುತ್ತಿತ್ತು. ತಾವೇ ತಯಾರಿಸಿದ ಪಾದರಕ್ಷೆಗಳನ್ನು ಧರಿಸುವಂತಿರಲಿಲ್ಲ. ಛತ್ರಿ, ಚಾಮರಗಳನ್ನು ಹಿಡಿಯಕೂಡದು. ವಿವಾಹ ಸಂದರ್ಭದಲ್ಲಿ ಮೆರವಣಿಗೆ ಮಾಡಕೂಡದು, ಕುದುರೆ ಸವಾರಿ ಮಾಡಬಾರದು, ಹಸುಗಳ ಹಾಲನ್ನು ಕರೆಯಬಾರದು, ಬಂಗಾರದ ಆಭರಣಗಳನ್ನು, ಹೊಸಬಟ್ಟೆಗಳನ್ನು ಧರಿಸಬಾರದು. ದೇಹದ ಮೇಲ್ಭಾಗಕ್ಕೆ ಹಳೆಯ ಬಟ್ಟೆಗಳನ್ನು ಕೂಡ ಧರಿಸಕೂಡದು ಮುಂತಾದ ನಿರ್ಬಂಧಗಳಿಗೆ ಹರಿಜನರು ಒಳಗಾಗಿದ್ದರು.

ಅಸ್ಪೃಶ್ಯರನ್ನು ಇತರ ಜಾತಿಯವರಿಂದ ಬೇರೆ ಇಡುವ ಪ್ರಯತ್ನವು ಜಾತಿ ಪದ್ಧತಿಯಿಂದ ನಡೆದಿತ್ತೆನ್ನಬಹುದು. ಅವರುಗಳಿಗೆ ಕೆಲವು ಶೈಕ್ಷಣಿಕ ಸೌಲಭ್ಯಗಳನ್ನು ಸಾಮಾಜಿಕ ಅವಕಾಶಗಳನ್ನು, ಕಾನೂನಿನ ಹಕ್ಕುಗಳನ್ನು, ರಾಜಕೀಯ ಪ್ರಾತಿನಿಧ್ಯವನ್ನು, ಧರ್ಮಾಚರಣೆಯ ಸ್ವಾತಂತ್ರ್ಯವನ್ನು ನಿರಾಕರಿಸಲಾಗಿತ್ತು. ಪೂಜಾ ಮಂದಿರಗಳಿಗೆ, ಸಾರ್ವಜನಿಕ ಉಪನ್ಯಾಸ ಮಂದಿರಗಳಿಗೆ ನಾಟ್ಯಾಲಯಗಳಿಗೆ, ಉಪಹಾರ ಮಂದಿರ ಮತ್ತು ವಸತಿನಿಲಯ ಇತ್ಯಾದಿ ಸಾರ್ವಜನಿಕ ಸ್ಥಳಗಳಿಗೆ ಅಸ್ಪೃಶ್ಯರಿಗೆ ಪ್ರವೇಶವಿರಲಿಲ್ಲ. ಜಾತಿ ಪದ್ಧತಿಯಲ್ಲಿ ಉದ್ಯೋಗದ ಅನಿರ್ಬಂಧಿತ ಆಯ್ಕೆಗೆ ಅವಕಾಶವಿರಲಿಲ್ಲ. ಒಂದು ಜಾತಿಯಲ್ಲಿ ವಂಶಪಾರಂಪರ್ಯವಾಗಿ ಬಂದ ಉದ್ಯೋಗವನ್ನು

ಬದಲಾಯಿಸಲು ಅವಕಾಶವಿರಲಿಲ್ಲ. ಉದ್ಯೋಗದಲ್ಲಿಯೂ ಏಣಿ ಶ್ರೇಣಿಗಳಿದ್ದು ಪ್ರತಿಯೊಂದು ಜಾತಿಯು ತನ್ನ ಗೌರವಕ್ಕೆ ಕುಂದು ತರಬಹುದಾದ ಉದ್ಯೋಗಗಳನ್ನು ತನ್ನ ಸದಸ್ಯರು ಕೈಗೊಳ್ಳದಂತೆ ನೋಡಿಕೊಳ್ಳುವ ಕ್ರಮವಿತ್ತು.

ಇಂತಹ ಅಮಾನವೀಯ ಜಾತಿ ವ್ಯವಸ್ಥೆಯನ್ನು ಬಹಳ ಹಿಂದಿನಿಂದಲೂ ಅನೇಕರು ವಿರೋಧಿಸುತ್ತಲೇ ಬಂದಿದ್ದಾರೆ. ಅವರಲ್ಲಿ ಪ್ರಮುಖರೆಂದರೆ ಭಗವಾನ್ ಬುದ್ಧ, ಬಸವೇಶ್ವರ ಗಾಂಧೀಜಿ, ಅಂಬೇಡ್ಕರ್‌ರಂಥ ಮಹಾನ್ ಚೇತನಗಳು. ಪ್ರಾಚೀನ ಕಾಲದಿಂದಲೂ ಸಮಾಜದಲ್ಲಿ ಜಾತಿಯ ಹೆಸರಿನಲ್ಲಿ ನಡೆಸುತ್ತಿದ್ದ ಅಸ್ಪೃಶ್ಯತೆಯ ಆಚರಣೆಗಳು ದೇಶದ ಪ್ರಗತಿಗೆ ಮಾರಕವಾಗಿವೆ. ಹಾಗಾಗಿ ಪ್ರತಿಯೊಬ್ಬರು ಮನುಷ್ಯ ನಿರ್ಮಿತ ಜಾತಿ ವ್ಯವಸ್ಥೆಯನ್ನು ಬೇರು ಸಹಿತ ಕಿತ್ತೊಗೆದು ಸಮಾಜದಲ್ಲಿ ಎಲ್ಲರಿಗೂ ಸಮಾನ ಗೌರವ ಲಭ್ಯವಾಗಿ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಹಕ್ಕುಗಳಿಗೆ ವಾರಸುದಾರನಾಗಿ ಈ ದೇಶದಲ್ಲಿ ಆತ್ಮಗೌರವದಿಂದ ಬದುಕುವಂತಾಗಬೇಕೆಂದು ಕರೆ ನೀಡಿದರು.

ಅಂಬೇಡ್ಕರ್ ಸ್ವತಃ ಅಸ್ಪೃಶ್ಯರಾಗಿ ಜೀವನದಲ್ಲಿ ಅಸ್ಪೃಶ್ಯರು ಅನುಭವಿಸಿದ ನೋವು, ಅವಮಾನಗಳನ್ನು ನೇರವಾಗಿ ಅನುಭವಿಸಿ ಜಾತಿ ಮತ್ತು ಅಸ್ಪೃಶ್ಯತಾ ಆಚರಣೆಯನ್ನು ಕಟುವಾಗಿ ಟೀಕಿಸಿ ದಲಿತರ ಉದ್ಧಾರಕ್ಕಾಗಿ ತಮ್ಮ ಜೀವನವನ್ನು ಮುಡಿಪಿಟ್ಟರು. ಸಾಮಾಜಿಕ ಕಾಂತಿಯ ಸಂಕೇತವಾದ ಅಂಬೇಡ್ಕರ್ ತಮ್ಮ ಜೀವನದುದ್ದಕ್ಕೂ ದಲಿತರ ಪರವಾಗಿ ಹೋರಾಟ ನಡೆಸಿ ಅವರಿಗೆ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯ ಹಕ್ಕುಗಳನ್ನು ಒದಗಿಸಿಕೊಟ್ಟಿದ್ದಾರೆ. ಹಿಂದೂಧರ್ಮ ದಲಿತರನ್ನು ಜಾತೀಯತೆ ಮತ್ತು ಅಸ್ಪೃಶ್ಯತೆಯ ಹೆಸರಿನಲ್ಲಿ ಅವಮಾನಗೊಳಿಸಿದಾಗ ದಲಿತರು ಇಂತಹ ವ್ಯವಸ್ಥೆಯ ವಿರುದ್ಧ ಸಂಘಟಿತರಾಗಿ ಈ ಅಮಾನುಷ ವ್ಯವಸ್ಥೆಯನ್ನು ಬೇರು ಸಹಿತ ಕಿತ್ತೊಗೆಯಬೇಕೆಂದು ಕರೆ ನೀಡಿದ್ದಾರೆ.

ಅಂಬೇಡ್ಕರರ ಸಾಮಾಜಿಕ ಚಳವಳಿ ಸ್ವಾಭಿಮಾನ ಮತ್ತು ಸ್ವಸುಧಾರಣೆಯದ್ದಾಗಿದೆ. ಅಂಬೇಡ್ಕರ್ ಮೊದಲಿಗೆ ದಲಿತರು ಸ್ವಾಭಿಮಾನಿಗಳಾಗಬೇಕೆಂದು ಮದ್ಯಪಾನ, ಸತ್ತ ಪ್ರಾಣಿಗಳನ್ನು ತಿನ್ನುವ ಅನಾಗರಿಕ ಪದ್ಧತಿಯಿಂದ ಮುಕ್ತರಾಗಿ ಸ್ವಸುಧಾರಣೆ ಮಾಡಿಕೊಳ್ಳಲು ಕರೆ ನೀಡಿದರು. "ಜಾತಿ ಬಿಟ್ಟು ದೇಶ ಕಟ್ಟಿ, ಜಾತಿ ಬಿಡಿ ಮತಬಿಡಿ, ಮಾನವೀಯತೆಗೆ ಜೀವ ಕೊಡಿ"೨ ಎನ್ನುವ ಕಳಕಳಿ ಅಂಬೇಡ್ಕರ್ ರವರದು. ಡಾ॥ಅಂಬೇಡ್ಕರ್ ಅವರ ಅಸ್ಪೃಶ್ಯತಾ ಆಚರಣೆಯ ವಿರುದ್ಧದ ಸಾಮಾಜಿಕ ಚಳವಳಿ ೧೯೧೮ ರಿಂದ ಪ್ರಾರಂಭವಾಗಿ ಅವರ ಕೊನೆಯುಸಿರುವವರೆಗೂ ಮುಂದುವರೆಯಿತು.

ಗಾಂಧೀಜಿಯವರು ಅಂಬೇಡ್ಕರ್‌ರವರಂತೆ ಸಾಮಾಜಿಕ ವ್ಯವಸ್ಥೆಯಲ್ಲಿ ತುಳಿತಕ್ಕೆ ಒಳಗಾದ ಶೂದ್ರ ಅಸ್ಪೃಶ್ಯರ ಪರವಾಗಿ ಹೋರಾಟ ನಡೆಸಿದರು. ಅಂಬೇಡ್ಕರ್ ಶೋಷಣೆಗೊಳಗಾದ ದಲಿತರೆ ತಮ್ಮ ಹಿತಾಸಕ್ತಿಗಾಗಿ ಸಂಘಟಿತರಾಗಿ ಸಾಮಾಜಿಕ ವ್ಯವಸ್ಥೆಯ ಅಮಾನವೀಯತೆಯನ್ನು ಪ್ರತಿಭಟಿಸಬೇಕೆಂದು ಕರೆ ನೀಡಿದರು. ಗಾಂಧೀಜಿ ಹಿಂದೂಧರ್ಮದ ಸವರ್ಣೀಯರ ಮನಸ್ಸನ್ನು ಪರಿವರ್ತನೆ ಮಾಡಿ ಅವರನ್ನು ಮಾನವರನ್ನಾಗಿ ಮಾಡಿ ಸಮಾಜದಲ್ಲಿರುವ ಕಟ್ಟಕಡೆಯ ಅಸ್ಪೃಶ್ಯರ ಹಿತಾಸಕ್ತಿ ಕಾಯುವುದು ಪ್ರತಿಯೊಬ್ಬರ ಆದ್ಯ ಕರ್ತವ್ಯವೆಂದು ತಾವು ಬದುಕಿ ಇತರರನ್ನು ಬದುಕಲು ಬಿಡುವಂತೆ ಸವರ್ಣೀಯರಿಗೆ ಕರೆ ನೀಡಿ ಸಮಾಜದಲ್ಲಿ ಮೇಲ್ವರ್ಗದಲ್ಲಿ ಸ್ಥಾನ ಪಡೆದ ಸವರ್ಣೀಯರು ದಲಿತರ ಪರವಾಗಿ ಹೋರಾಡಬೇಕೆಂದರು.

ತಮ್ಮ ಜೀವಮಾನದುದ್ದಕ್ಕೂ ಅಸ್ಪೃಶ್ಯರ ಹಿತಚಿಂತಕರಾದ ಗಾಂಧೀಜಿ "ನನಗೆ ಮೋಕ್ಷ ಬೇಡ, ಪುನರ್‌ಜನ್ಮ ಬೇಡ, ಪುನರ್‌ಜನ್ಮವೇ ಇದ್ದರೆ ನಾನೊಬ್ಬ ಅಸ್ಪೃಶ್ಯನಾಗಿ ಹುಟ್ಟಿ ಅವರ ದುಃಖ, ಕಷ್ಟಕೋಟಲೆಗಳನ್ನು ಅನುಭವಿಸಿ ಅಂತಹ ಪರಿಸ್ಥಿತಿಯಿಂದ ಅವರನ್ನು ಮುಕ್ತಗೊಳಿಸಬಯಸುತ್ತೇನೆ. ಆದ್ದರಿಂದ ನನ್ನ ಪ್ರಾರ್ಥನೆಯಿಷ್ಟೆ: ನಾನು ಮತ್ತೆ ಜನ್ಮ ಪಡೆಯುವುದೆ ಇದ್ದರೆ ನಾನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಜನ್ಮ ಪಡೆಯದೆ ಅತಿ ಶೂದ್ರನಾಗಿ ಹುಟ್ಟ ಬಯಸುತ್ತೇನೆ"೩ ಎಂದಿದ್ದಾರೆ. ನುಡಿದಂತೆ ನಡೆದ ಗಾಂಧೀಜಿ ದಲಿತರ ಮನೆಗಳಲ್ಲಿ ತಂಗಿ ಆಹಾರ ಸೇವಿಸುವ ಮೂಲಕ ಅಸ್ಪೃಶ್ಯತಾ ಆಚರಣೆಯನ್ನು ತೊಡೆದು ಹಾಕಲು ಕಂಕಣ ಬದ್ಧರಾದರು. ಅಸ್ಪೃಶ್ಯರನ್ನು ದೇವರ ಮಕ್ಕಳೆಂದು ನಂಬಿ ಅವರನ್ನು "ಹರಿಜನ" ಎಂದು ಕರೆದರು ಅವರ ಪರವಾಗಿ ಹೋರಾಡಲು 'ಹರಿಜನ ಪತ್ರಿಕೆ' ಎಂಬ ಪತ್ರಿಕೆಯನ್ನು ತಂದರು.

ವೈದಿಕ ಪರಂಪರೆಯ ಜಾತಿ ವ್ಯವಸ್ಥೆಯಲ್ಲಿದ್ದ ಈ ಸಾಮಾಜಿಕ ಅಸಮಾನತೆಯಿಂದ ವಿವಿಧ ವರ್ಗದ ಜನರು ನಾನಾ ರೀತಿಯ ಮುಜುಗರ ಮತ್ತು ಅವಮಾನಗಳನ್ನು ಅಸ್ಪೃಶ್ಯರು ಉಪೇಕ್ಷೆಯನ್ನು ಅನುಭವಿಸಬೇಕಾಗಿದ್ದ ಪರಿಸ್ಥಿತಿಯಲ್ಲಿ ಜಾತಿ ವ್ಯವಸ್ಥೆಯ ಈ ಅಸಮಾನತೆಯನ್ನು ವೈದಿಕ ಧರ್ಮದ ಕಠೋರ ಧಾರ್ಮಿಕ ವಿಧಿಯನ್ನು ವಿರೋಧಿಸಿ ಬುದ್ಧ ಬೌದ್ಧ ಧರ್ಮವನ್ನು ಮಹಾವೀರ ಜೈನಧರ್ಮವನ್ನು ಸ್ಥಾಪಿಸಿದರು.

ಕನ್ನಡ ಸಾಹಿತ್ಯದ ಸಂದರ್ಭದಲ್ಲಿಯೂ ಜಾತೀಯತೆಯ ಹಿನ್ನೆಲೆಯಲ್ಲಿ ರೂಪುಗೊಂಡ ತಾರತಮ್ಯವನ್ನು ವಿರೋಧಿಸಿದ ಅನೇಕ ಸಾಹಿತಿಗಳಿದ್ದಾರೆ. ಅವರಲ್ಲಿ ೧೦ನೇ ಶತಮಾನದಲ್ಲಿದ್ದ "ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ" ಎಂದು ನಾಗರಾಜನಿಂದ ಕೀರ್ತಿತನಾದ ಕನ್ನಡದ ಆದಿಕವಿ ಪಂಪನೇ "ಮಾನವ ಜಾತಿ ತಾನೊಂದೆ ವಲಂ" ಎಂದು ಜಾತಿ ಆಚರಣೆಯನ್ನು ಖಂಡಿಸಿ (ಪ್ರಪಂಚದಲ್ಲಿರುವುದು ಒಂದೇ ಜಾತಿ ಅದು ಮಾನವ ಜಾತಿ ಎಂದು ಸರ್ವ ಸಮಾನತೆಯನ್ನು ಎತ್ತಿ ಹಿಡಿದಿದ್ದಾನೆ.

ನಂತರ ೧೨ನೇ ಶತಮಾನದ ವಚನ ಸಾಹಿತ್ಯದ ಸಂದರ್ಭದಲ್ಲಿಯಂತೂ ಜಾತಿ ವ್ಯವಸ್ಥೆ ವಿರುದ್ಧ ವಚನಕಾರರು ಸಾಮಾಜಿಕ ಆಂದೋಲನವನ್ನ ನಡೆಸಿದರು. ಈ ಆಂದೋಲನದ ಮುಂದಾಳತ್ವವನ್ನು ವಹಿಸಿದರು. ಬಸವಣ್ಣನವರು "ಕೊಲುವವನೇ ಮಾದಿಗ, ಹೊಸಲು ತಿಂಬವನೇ ಹೊಲೆಯ, ಕುಲವೇನೋ ಅವಂದಿರ ಕುಲವೇನೋ? ಸಕಲ ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ ಕೂಡಲ ಸಂಗಮದೇವಾ" ಎಂದಿದ್ದಾರೆ. ಅಷ್ಟೇ ಅಲ್ಲದೆ ಈ ಕಾಲಘಟ್ಟದಲ್ಲಿ ಹರಳಯ್ಯ ಮಧುವರಸರ ಮಕ್ಕಳಿಗೆ ವಿವಾಹ ಮಾಡಿಸುವ ಮೂಲಕ ಅಂತರ್ಜಾತಿಯ ವಿವಾಹಕ್ಕೆ ಪ್ರೇರಣೆ ನೀಡಿ ಆ ಮೂಲಕ ಸಾಮಾಜಿಕ ಅಸಮಾನತೆಯನ್ನು ತೊಡೆದು ಹಾಕಲು ಕಾರ್ಯಪ್ರವೃತ್ತರಾದರು.

೧೬ನೇ ಶತಮಾನದಲ್ಲಿ ಕೀರ್ತನಕಾರರಾದ ಪುರಂದರದಾಸರು, ಕನಕದಾಸರು ಸಾಹಿತ್ಯವನ್ನು ಮನೆ ಬಾಗಿಲಿಗೆ ತರುವ ಸಂದರ್ಭದಲ್ಲಿ ಸಮಾಜದ ಲೋಪದೋಷಗಳನ್ನು ಕೀರ್ತನೆಗಳಲ್ಲಿ ಎತ್ತಿ ಹಿಡಿದಿದ್ದಾರೆ. ಅವರ ಕೀರ್ತನೆಗಳು ಜಾತಿ ಆಚರಣೆಯ ಬಗೆಗಿನ ವಿಡಂಬನೆಯನ್ನು ಧ್ವನಿಸುತ್ತದೆ.

"ಮಡಿ ಮಡಿ ಮಡಿಯೆಂದು ಅಡಿಗಡಿ ಹಾರುವಿ", "ಹೊಲೆಯ ಹೊರಗಿಹನೆ ಊರೊಳಗಿಲ್ಲವೆ", "ಆವ ಕುಲವಾದರೇನು ಆವನಾದರೇನು", "ಕುಲದ ಮೇಲೆ ಹೋಗಬೇಡ ಕುಲವಿಲ್ಲ ಜ್ಞಾನಿಗಳಿಗೆ" ಈ ಕೀರ್ತನೆಗಳು ಜಾತಿವ್ಯವಸ್ಥೆಯನ್ನು ಅಲ್ಲಗಳೆಯುತ್ತವೆ. ತ್ರಿಪದಿಯ ಸಾರ್ವಭೌಮನೆನಿಸಿದ ಸರ್ವಜ್ಞ "ಜಾತಿ ಹೀನನ ಮನೆಯ ಜ್ಯೋತಿ ತಾ ಹೀನವೇ ಜಾತಿ ವಿಜಾತಿ ಎನ್ನಬೇಡ ದೈವನೊಲಿದಾವನೇ ಜಾತ ಸರ್ವಜ್ಞ" ಎಂದಿದ್ದಾನೆ. ಜಾತಿ ವ್ಯವಸ್ಥೆಯ ವಿರುದ್ಧ ಪ್ರತಿಭಟನೆಗಳು ವ್ಯಕ್ತವಾಗುತ್ತಲೇ ಇವೆ.

ಆಧುನಿಕ ಕನ್ನಡ ಸಾಹಿತ್ಯವೂ ಇದಕ್ಕೆ ಹೊರತಾದುದಲ್ಲ. ಇಲ್ಲಿಯೂ ಜಾತಿ ವ್ಯವಸ್ಥೆಯ ವಿರುದ್ಧ ಪ್ರತಿಭಟಿಸಿರುವುದನ್ನು ಅನೇಕರ ಸಾಹಿತ್ಯ ಕೃತಿಗಳಲ್ಲಿ ಕಾಣಬಹುದು. ಹೀಗೆ ಈ ವ್ಯವಸ್ಥೆಯನ್ನು ಬಲವಾಗಿ ವಿರೋಧಿಸಿದವರಲ್ಲಿ ಮಹಾಮೇರುವಿನಂತಿರುವವರು ಕುವೆಂಪು. ಕುವೆಂಪು ಅವರಿಗೆ ಭಾರತದ ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆಯ ಬಗೆಗೆ ಸ್ಪಷ್ಟ ಅರಿವಿತ್ತು. ಅಂತೆಯೇ ಜಾತಿ, ಮತ, ಧರ್ಮಗಳ ಒತ್ತಡ ಮತ್ತು ಪರಿಣಾಮಗಳನ್ನು ಅವರು ಬಲ್ಲವರಾಗಿದ್ದರು. ಇವೆಲ್ಲ ಭಾರತೀಯ ಮನಸ್ಸುಗಳನ್ನು ದುರ್ಬಲಗೊಳಿಸಿದ, ಸಂಕುಚಿತಗೊಳಿಸಿದ ಆ ಮೂಲಕ ಛಿದ್ರಗೊಳಿಸಿದ ಪರಿ ಅವರನ್ನು ಕಾಡುತ್ತಿತ್ತು. ಹೀಗಾಗಿ ತಮ್ಮಲ್ಲಿ ಸಾಹಿತ್ಯ ಕೃತಿಗಳಲ್ಲಿ ಇವುಗಳನ್ನು ಮೀರಿ ನಿಂತು ಮಾನವೀಯ ಮೌಲ್ಯಗಳನ್ನು ಪ್ರತಿಪಾದಿಸುವ ಪ್ರಯತ್ನವನ್ನು ಮಾಡಿದವರು ಕುವೆಂಪು.

ಕುವೆಂಪು ಅವರಿಗೆ ಭಾರತದ ಇತಿಹಾಸ ಮತ್ತು ಸಾಂಸ್ಕೃತಿಕ ಪರಂಪರೆಯ ಬಗೆಗೆ ಸ್ಪಷ್ಟ ಅರಿವಿತ್ತು. ಇವುಗಳ ಮೇಲಾದ ಭಕ್ತಿ ಮತ್ತು ದೈವ ಪಾರಮ್ಯದ ಪ್ರಭಾವ ಅಂತೆಯೇ ಜಾತಿ, ಮತ, ಧರ್ಮಗಳ ಒತ್ತಡ ಪರಿಣಾಮಗಳನ್ನು ಅವರು ಬಲ್ಲವರಾಗಿದ್ದರು. ಈ ಅಂಶ ಅವರ ಎಲ್ಲ ಸಾಹಿತ್ಯ ಕೃತಿಗಳಲ್ಲೂ ವ್ಯಕ್ತವಾಗಿರುವುದನ್ನು ಕಾಣಬಹುದು.

ಕುವೆಂಪು ಅವರ ಪಾಲಿಗೆ ನಿಜವಾದ ದೇವರು ಪ್ರಕೃತಿ. ಪುರೋಹಿತ ಶಾಹಿ ರೂಪಿಸಿರುವ ಹೇಳಿರುವ ದೇವರುಗಳಲ್ಲಿ ಪ್ರಕೃತಿಯಲ್ಲೆ ಭಗವಂತನನ್ನು ಕಾಣಬೇಕೆಂಬ ನಿಲುವು ಅವರದು. "ನೂರು ದೇವರನೆಲ್ಲ ನೂಕಾಚೆ ದೂರ" ಎನ್ನುವ ಕವಿ "ಸತ್ತ ಕಲ್ಲಳ ಮುಂದೆ ಅತ್ತು ಕರೆದುದು ಸಾಕು, ಜೀವಧಾತೆಯನಿಂದು ಕೂಗಬೇಕು" ಎಂದು ಕರೆ ನೀಡುವ ಮೂಲಕ ಜಾತ್ಯಾತೀತ ರಾಷ್ಟ್ರೀಯತೆಯ ಔನ್ನತ್ಯವನ್ನು ಸಾಧಿಸುತ್ತಾರೆ.

ಭಾರತದಲ್ಲಿ ವ್ಯಕ್ತಿಯ ಹೆಸರನ್ನು ಹೇಳುತ್ತಿದ್ದಂತೆಯೇ ಆತ ಯಾವ ಜಾತಿ ಮತಕ್ಕೆ ಸೇರಿದವನೆಂದು ಗುರ್ತಿಸಬಹುದು. ಒಂದು ಜಾತಿಯೊಡನೆ ಗುರ್ತಿಸಿಕೊಂಡ ವ್ಯಕ್ತಿ ಇನ್ನೊಂದು ಜಾತಿಯವನನ್ನು ಪ್ರೀತಿಸುವುದು ಅಪರೂಪ. ಇಂಥ ಅಮಾನವೀಯ ಸ್ಥಿತಿಗೆ ನಮ್ಮನ್ನು ದೂಡುವ ಧರ್ಮ, ದೈವಗಳು ಬೇಡವೆನ್ನುವ ಕುವೆಂಪು.

"ರೂಪರೂಪಗಳನು ದಾಟಿ

ನಾಮಕೋಟಿಗಳನು ಮೀಟಿ

ಎದೆಯ ಬಿರಿಯ ಭಾವದೀಟಿ

ಓ ನನ್ನ ಚೇತನ ಆಗು ನೀ ಅನಿಕೇತನ"

ಎನ್ನುವ ಮೂಲಕ ತಮ್ಮ ಚೇತನ ಇಂಥ ಮತ ತತ್ವಗಳ ಎಲ್ಲೆಯನ್ನು ಮೀರಿ ನಿರ್ದಿಗಂತವಾಗಿ ಏರಬೇಕೆಂದು ಹಂಬಲಿಸುತ್ತಾರೆ. ಜಾತಿಮತಗಳಿಗೆ ಕೊನೆಯಿದೆ, ಗಡಿಇದೆ. ಆದರೆ ಮಾನವ ತತ್ವಕ್ಕೆ ಆದಾವುದೂ ಇಲ್ಲ. ಕುವೆಂಪುರವರ ಜಾತ್ಯಾತೀತ ಪರಿಕಲ್ಪನೆ ಈ ಬಗೆಯದು.

ಪುರೋಹಿತಶಾಹಿ ಧೋರಣೆಗೆ ಸಿಲುಕಿ ಶೂದ್ರರನ್ನು ತುಳಿದದ್ದಕ್ಕಾಗಿ ಹಳೆಯ ಧರ್ಮ ಮತ್ತು ಮೌಲ್ಯಗಳನ್ನು ತಿರಸ್ಕರಿಸಬೇಕೆಂದಾಗಲಿ, ನಾಶಪಡಿಸಬೇಕೆಂದಾಗಲಿ ಕುವೆಂಪು ಹೇಳುವುದಿಲ್ಲ. ಬದಲಾಗಿ ಮತಧರ್ಮ ವಿಚಾರ ಯಾವುದೇ ಇರಲಿ, ಹಳೆಯ ಒಡವೆಗಳನ್ನು ಕರಗಿಸಿ ಆಧುನಿಕ ಆಭರಣಗಳನ್ನು ಮಾಡಿಸಿಕೊಳ್ಳುವಂತೆ ಹೊಸ ಧ್ಯೇಯ ಧೋರಣೆಗಳಿಗನುಗುಣವಾಗಿ ಅವುಗಳನ್ನು ಪುನರ್ ರೂಪಿಸಿಕೊಳ್ಳಬೇಕೆಂದು ಆಶಿಸುತ್ತಾರೆ. ಹೀಗಾಗಿ ಸಾಂಸ್ಥಿಕ ಧರ್ಮದ ನೆಲೆಯಲ್ಲಿ, ಮತೀಯ ಚೌಕಟ್ಟಿನಲ್ಲಿ ವೈದಿಕ ಸಂಸ್ಕೃತಿಯ ಶ್ರೇಷ್ಠತೆಯನ್ನು ಸಾರುವ ಜಪ, ತಪ, ಜ್ಞಾನ, ಜಾತಿ ಇತ್ಯಾದಿಗಳನ್ನು ತಾರ್ಕಿಕ ನೆಲೆಯಲ್ಲಿ ಶೋಧಿಸಿ ಹೊಸ ಮೌಲ್ಯಗಳನ್ನು ಕಟ್ಟಿಕೊಡುತ್ತಾರೆ. ಇದನ್ನು ಅವರ ಬೆರಳ್ಗೆಕೊರಳ್, ಶೂದ್ರತಪಸ್ವಿ, ಜಲಗಾರ ನಾಟಕಗಳಲ್ಲಿ ಕಾಣಬಹುದು.

'ಬೆರಳ್ಗೆಕೊರಳ್' ನಾಟಕದಲ್ಲಿ ಗುರುಭಕ್ತಿಯನ್ನು ಪ್ರತಿಮೆಯಾಗಿ ಉಳಿಸಿಕೊಂಡು ಬೆರಳಿಗೆ ಪರ್ಯಾಯವಾಗಿ ತಾಯಿಯನ್ನು ಸೃಷ್ಟಿಸುವ ಕುವೆಂಪು ದ್ರೋಣರ ಅಜ್ಞಾನದ ಅಹಂ ಅನ್ನು ಆ ತಾಯಿಯ ಮೂಲಕ ಇಲ್ಲವಾಗಿಸುತ್ತಾರೆ. ಮೇಲ್ವರ್ಗದ ಅರ್ಜುನನ ರಾಜತ್ವದ ಬುಡವನ್ನು ಅಲ್ಲಾಡಿಸುತ್ತಲೇ ಕೆಳವರ್ಗದ ಏಕಲವ್ಯನ ಸ್ವಾತಂತ್ರ್ಯದ ನೆಲೆಯನ್ನು ಪ್ರತಿಪಾದಿಸುತ್ತಾರೆ.

'ಶೂದ್ರ ತಪಸ್ವಿ'ಯಲ್ಲಿ ತಪಕ್ಕೆ ಪರ್ಯಾಯವನ್ನು ಶಂಬೂಕನ ಮೂಲಕ ದೃಷ್ಟಿಸುತ್ತಾರೆ. ತಪಸ್ಸು ಕೇವಲ ಬ್ರಾಹ್ಮಣರ ಸೊತ್ತು. ಶೂದ್ರರಿಗೆ ನಿಷಿದ್ಧ ಎಂಬುದನ್ನು ಶಂಭೂಕನ ಪಾತ್ರದ ಮೂಲಕ ವಿಡಂಬಿಸುತ್ತ ತಪಸ್ಸನ್ನು ಶೂದ್ರವರ್ಗಕ್ಕೆ ತಲುಪಿಸುವ ಮೂಲಕ ಏಕಕಾಲಕ್ಕೆ ಜಾತಿಧರ್ಮದ ಕಟ್ಟುಕಟ್ಟಳೆಯನ್ನು ಸಡಿಲಗೊಳಿಸಿ ಸಾರ್ವತ್ರಿಕಗೊಳಿಸಿದ್ದಾರೆ.

ಇವೆರಡಕ್ಕೆ ಪೂರಕವಾದ ನಾಟಕ 'ಜಲಗಾರ' ಜಾತಿ ಮತ್ತು ವರ್ಗದ ದೃಷ್ಟಿಯಿಂದ ಪಂಚಮನಾದ ಜಲಗಾರ "ಕರ್ಮಾರಾಧನೆ ಸೇವೆಯೇ ಪೂಜೆ ನನ್ನ ಭಾಗಕ್ಕೆ ಪೊರಕೆಯೇ ಆರತಿ" ಎಂದು ಗುಡಿಯ ದೇವರನ್ನು ನಿರಾಕರಿಸಬಲ್ಲ ಶಕ್ತ. ಈ ನಾಟಕದಲ್ಲಿ ಜಾತಿಯ ಕಟ್ಟು ಸಮಾಜದ ವಿಷಮತೆಗೆ ಕಾರಣವಾಗುವ ಪರಿ ಕಣ್ಣಿಗೆ ಕಟ್ಟುವಂತಿದೆ. ಕುವೆಂಪು ಜಲಗಾರ ಮತ್ತು ಶಿವನ ನಡುವೆ ಪರಸ್ಪರ ಸಮಾನತೆ ಕಲ್ಪಿಸಿ ಜಾತಿಯ ವಿಷಮತೆಗೆ ಕೊಡಲಿ ಪೆಟ್ಟು ಕೊಟ್ಟಿದ್ದಾರೆ.

ಒಟ್ಟಾರೆ ಸಾಮಾಜಿಕ ಅಸಮಾನತೆಯ ವಿರುದ್ಧ ತಮ್ಮ ಎಲ್ಲಾ ಸಾಹಿತ್ಯ ಕೃತಿಗಳಲ್ಲಿ ದನಿಯೆತ್ತಿದ ಕುವೆಂಪು ಅವರ ದೃಷ್ಟಿಯಲ್ಲಿ ೨೦ನೇ ಶತಮಾನದ ನಾಯಕ ಶ್ರೀಸಾಮಾನ್ಯ. ದೇವರು, ಧರ್ಮ, ಜಾತಿ. ಪುರೋಹಿತಶಾಹಿಗಳ ಜಾಗದಲ್ಲಿ ಶ್ರೀಸಾಮಾನ್ಯನನ್ನು ಸ್ಥಾಪಿಸುವ ಹವಣಿಕೆ ಕುವೆಂಪು ಅವರದ್ದು. ಶ್ರೀಸಾಮಾನ್ಯನ ಉದ್ಧಾರವನ್ನು ಸರ್ವೋದಯದ ನೆಲೆಯಲ್ಲಿ ಕಂಡುಕೊಳ್ಳುತ್ತಾರೆ. ತಮ್ಮ ಮಹಾಕಾವ್ಯ 'ಶ್ರೀರಾಮಾಯಣ ದರ್ಶನಂ' ನ ಎಲ್ಲ ಪಾತ್ರಗಳೂ ಜಾತಿ, ಅಂತಸ್ತು, ಅಸಮಾನತೆಗಳ ಗಡಿಯನ್ನು ದಾಟಿ ಉದ್ಧಾರದ ದಾರಿಯನ್ನು ಹುಡುಕಿಕೊಳ್ಳುವುದನ್ನು ಕಾಣಬಹುದು.

ಈ ಸಂದರ್ಭದಲ್ಲಿ ಗಮನಿಸಬೇಕಾದದ್ದು 'ಮಲೆಗಳಲ್ಲಿ ಮದುಮಗಳು' ಕಾದಂಬರಿಯನ್ನು, ಕಾದಂಬರಿಯ ಉದ್ದಕ್ಕೂ ಎಲ್ಲೆಲ್ಲಿ ದೇವರು, ಜಾತಿ, ಮತ ಮೂಢನಂಬಿಕೆಗಳು ಇರುತ್ತವೋ, ಅಲ್ಲೆಲ್ಲ ಕುವೆಂಪು ಅವರು ಕಾದಂಬರಿಯ ಕಲಾತ್ಮಕತೆಯನ್ನು ಕಡೆಗಣಿಸಿ ಅವನ್ನು ಲೇವಡಿ ಮಾಡುತ್ತಾರೆ.

ಅಡಿ ಟಿಪ್ಪಣಿ:

೧) ಚಿ.ನ.ಶಂಕರ್‌ರಾವ್ : ಸಮಾಜಶಾಸ್ತ್ರ ಪು.ಸಂ.೪೨

೨) ಪ್ರೊ: ದಯಾನಂದಮಾನೆ: ಬಾಬಾ ಸಾಹೇಬ್ ಅಂಬೇಡ್ಕರ್ ಮತ್ತು ದಲಿತ ಚಳುವಳಿ ಪು.ಸಂ.೧೬೧

೩) ಅಮೊ. ಪು.ಸಂ.೨೪೬.

# ೫.ಕಾದಂಬರಿಯಲ್ಲಿ ಜಾತಿಪದ್ಧತಿ ಮತ್ತು ಜೀತಪದ್ಧತಿ

**ಜಾತಿಪದ್ಧತಿ:**

ಶತಶತಮಾನಗಳಿಂದ ಭಾರತೀಯ ಹಿಂದೂ ಪರಂಪರೆಯಲ್ಲಿ ಆಳವಾಗಿ ಬೇರು ಬಿಟ್ಟು ವರ್ಣ-ವರ್ಗ ಸಂಘರ್ಷಕ್ಕೆ ಕಾರಣವಾಗಿರುವ ಮೂಲಭೂತ ಪಿಡುಗುಗಳಲ್ಲಿ ಜಾತಿ ವ್ಯವಸ್ಥೆಯೂ ಒಂದು. ಈ ಪದ್ಧತಿಯು ವೇದಗಳ ಕಾಲದಿಂದಲೂ ಅಸ್ತಿತ್ವದಲ್ಲಿದೆ. ಆದರೆ ಆ ಕಾಲದಲ್ಲಿ ಜಾತಿವ್ಯವಸ್ಥೆ ಹೆಚ್ಚು ಜಟಿಲವಾಗಿರಲಿಲ್ಲ. ಒಂದು ಜಾತಿಯಿಂದ ಮತ್ತೊಂದು ಜಾತಿಗೆ ಪ್ರವೇಶಿಸಲು ಮುಕ್ತ ಅವಕಾಶವಿತ್ತು. ಆದರೆ ಇದು ಕ್ರಮೇಣ ಸಂಕೀರ್ಣಗೊಂಡು, ಹುಟ್ಟನ್ನಾಧರಿಸಿ ರೂಪುಗೊಂಡಿತು. ಪ್ರತಿಯೊಂದು ಜಾತಿಯ ಜನರು ತನ್ನ ಜಾತಿಗೆ ನಿರ್ದಿಷ್ಟಪಡಿಸಿದ ವೃತ್ತಿಯನ್ನೇ ಅನುಸರಿಸಬೇಕಾಯ್ತು. ಮಾತ್ರವಲ್ಲದೆ ತನ್ನಲ್ಲಿ ಎಷ್ಟೇ ಪ್ರತಿಭೆ ಪ್ರಾವಿಣ್ಯತೆಗಳಿದ್ದರೂ ಅನ್ಯ ವೃತ್ತಿಯನ್ನನುಸರಿಸಲು ಸಾಧ್ಯವಿಲದೆ ಅನೇಕ ಮೂಲಭೂತ ಸೌಕರ್ಯಗಳಿಂದ ವಂಚಿತರಾಗಿ ಬದುಕಬೇಕಾಯ್ತು. ಜಾತಿ ವ್ಯವಸ್ಥೆಯನ್ನು ಶ್ರೇಣೀಕರಣಗೊಳಿಸಿ ಮೇಲ್ಜಾತಿಯವರು ತಮಗಿಂತ ಕೆಳಜಾತಿಯವರನ್ನು ಶೋಷಿಸುತ್ತಾ ಬಂದರು.

ಈ ಬಗೆಯ ಶೋಷಣೆ ಅನೂಚಾನವಾಗಿ ಇಂದೂ ಮುಂದುವರೆಯುತ್ತಾ ಬಂದಿದೆ. ಪ್ರಸ್ತುತ ಕಾದಂಬರಿಯಲ್ಲಿಯೂ ಶ್ರೇಣೀಕರಣ ವ್ಯವಸ್ಥೆಯಲ್ಲಿ ಕಂಡು ಬರುವ ಮೇಲು-ಕೀಳು ಭಾವನೆಯನ್ನು ಹಿಡಿದಿಡುವ ಪ್ರಯತ್ನ ಕಂಡು ಬರುತ್ತದೆ. ಕಾದಂಬರಿಯಲ್ಲಿ ಪ್ರಧಾನವಾಗಿ ನಾಲ್ಕು ಜಾತಿಗಳು ಕಂಡು ಬರುತ್ತವೆ. ಬ್ರಾಹ್ಮಣರು, ಗೌಡರು(ಒಕ್ಕಲಿಗರು), ಮುಸ್ಲಿಮರು ಮತ್ತು ಕ್ರಿಶ್ಚಿಯನ್ನರು. ಇವರಲ್ಲಿ ಗೌಡರ ಸುತ್ತ ಆಶ್ರಯಿಸಿಕೊಂಡು ಬದುಕುತ್ತಿರುವ ಕೆಳವರ್ಗದ ದಲಿತರ ಬದುಕಿನ ವ್ಯಾಪಾರವನ್ನು ಹೆಚ್ಚು ಕುತೂಹಲಕಾರಿಯಾಗಿ ಚಿತ್ರಿಸುತ್ತಾರೆ ಕುವೆಂಪು.

ಕೆಳವರ್ಗದ ಜನರು ಬೌದ್ಧಿಕ, ಮಾನಸಿಕ, ದೈಹಿಕ ಹಾಗೂ ಆರ್ಥಿಕವಾಗಿ ಶೋಷಣೆಗೆ ಒಳಗಾಗುವಲ್ಲಿ ಬ್ರಾಹ್ಮಣರು ಪರೋಕ್ಷವಾಗಿಯೂ, ಗೌಡರು ಪ್ರತ್ಯಕ್ಷವಾಗಿಯೂ ಕಾರಣರಾಗಿದ್ದಾರೆ. ''ಜಾತಿಯ ಶ್ರೇಣೀಕೃತ ರಚನೆಯಲ್ಲಿ ಬ್ರಾಹ್ಮಣನ ಪಾದ ಶೂದ್ರನ ತಲೆಯಮೇಲಿದ್ದರೆ ಶೂದ್ರನ ಪಾದಗಳು ದಲಿತನ ತಲೆಯ ಮೇಲಿದೆ. ಹೀಗಾಗಿ ದಲಿತರ ಮೇಲಿನ ತುಳಿತವು ಬ್ರಾಹ್ಮಣನಿಗಿಂತ ಶೂದ್ರನಿಂದ ನೇರವೂ, ತೀವ್ರವೂ ಆಗಿ ಪರಿಣಮಿಸಿ ಅಮಾನುಷವಾಗುತ್ತದೆ. ಕುವೆಂಪು ತಮ್ಮ ಕಾದಂಬರಿಯಲ್ಲಿ ದಲಿತರ ಇಂಥ ಪರಿಸ್ಥಿತಿಯನ್ನು ವರ್ಣಿಸುತ್ತಾರಾದರು, ಅವರ ಅಂತಃಕರಣವೆಲ್ಲ ಊಳಿಗಮಾನ್ಯ ಜಮೀನುದಾರರ, ಗೌಡರ ಪರವಾಗಿದ್ದು, ಬ್ರಾಹ್ಮಣರ ವಿರೋಧಿಯಾಗಿದೆಯೇ ಹೊರತು ದಲಿತರ ಪರವಾಗಿಲ್ಲ''೧ ಎಂಬುದು ಬಿ.ಕೃಷ್ಣಪ್ಪರ ಅವರ ಅಭಿಪ್ರಾಯ.

ಆದರೆ ಈ ಆಪಾದನೆ ಹುರಳಿಲ್ಲದ್ದು. ಇಲ್ಲಿ ಕುವೆಂಪುರವರಿಗೆ ದ್ವೇಷವಿರುವುದು ಬ್ರಾಹ್ಮಣ ವರ್ಗದ ಮೇಲಲ್ಲ, ಬದಲಿಗೆ ಮೌಢ್ಯ ಅಜ್ಞಾನ ಸಂಪ್ರದಾಯಗಳನ್ನು ಮುಗ್ಧ ಜನರಲ್ಲಿ ಪ್ರಚಾರ ಮಾಡುತ್ತಾ ಸಾಮಾಜಿಕ ಅನಾರೋಗ್ಯವನ್ನು ಹರಡುತ್ತಿರುವ ಪುರೋಹಿತಶಾಹಿಯ ವಿರುದ್ಧ ಎಂದು ಹೇಳಬಹುದು. ಈ ಬಗ್ಗೆ ಅವರು ತಮ್ಮ ನಿಲುವನ್ನು ವಿಚಾರಕ್ರಾಂತಿಗೆ ಆಹ್ವಾನ ನೀಡುವ ಭಾಷಣದಲ್ಲಿ ಸ್ಪಷ್ಟಪಡಿಸಿದ್ದಾರೆ. ''ಪುರೋಹಿತಶಾಹಿ ಎಂದರೆ ಸಾಮಾನ್ಯವಾಗಿ ಬ್ರಾಹ್ಮಣ ವರ್ಗ

ಅಂತ ಅಲ್ಲ. ನಾನು ಯಾವ ಒಂದು ವ್ಯಕ್ತಿಯನ್ನು ಮಹೋನ್ನತ ಸ್ಥಾನದಲ್ಲಿಟ್ಟು ಪೂಜಿಸುತ್ತಿದ್ದೆನೋ ಆ ವ್ಯಕ್ತಿ ಬ್ರಾಹ್ಮಣರಾಗಿದ್ದರೂ.......... ಈ ದೇಶದಲ್ಲಿ ಹಿಂದೂಧರ್ಮದ ಪುರೋಹಿತಶಾಹಿ ವರ್ಗ ಎಲ್ಲೋ ಶೇಕಡ ೫ ರಷ್ಟು ಇದ್ದಾರೆ. ಅವರಿಗೆಲ್ಲ ಬೆಂಬಲ ಎಲ್ಲಿಂದ ಬರುತ್ತದೆ. ಬೇರೆಯವರಿಂದ ಬರುತ್ತದೆ. ನಾವು ಈ ಬಾಕಿಯವರ ಮನಸ್ಸನ್ನು ತಿದ್ದಿ ತಿರುಗಿಸಿದರೆ ಅದು ತನ್ನಷ್ಟಕ್ಕೆ ತಾನೆ ಒಣಗಿ ಹೋಗುತ್ತದೆ"೨

ಹೀಗೆ ಜನಸಾಮಾನ್ಯರಲ್ಲಿ ತುಂಬಿರುವ ಅಜ್ಞಾನ, ಮೌಢ್ಯ ತೊಲಗದ ಹೊರತು ಪುರೋಹಿತಶಾಹಿಯ ಹಿಡಿತದಿಂದ ಬಿಡುಗಡೆ ಹೊಂದಲು ಸಾಧ್ಯವಿಲ್ಲ ಎಂದು ನಂಬಿದ್ದ ಕುವೆಂಪು ಜನತೆ ವೈಜ್ಞಾನಿಕ ದೃಷ್ಟಿ ಹಾಗೂ ವೈಚಾರಿಕ ಜಾಗೃತಿಯನ್ನು ಬೆಳೆಸಿಕೊಳ್ಳಬೇಕೆಂಬ ಕಳಕಳಿ ಹೊಂದಿದ್ದರು.

'ಮಲೆಗಳಲ್ಲಿ ಮದುಮಗಳು' ಕಥನದ ನಲವತ್ತನೆಯ ಭಾಗ ಪುರೋಹಿತಶಾಹಿ ಬದುಕಿನ ಅನೇಕ ಚಿತ್ರಗಳನ್ನು ನಮ್ಮ ಮುಂದಿಡುತ್ತದೆ. ಬೆಟ್ಟಳ್ಳಿಯಿಂದ ಕಲ್ಲೂರಿಗೆ ಸತ್ಯ ನಾರಾಯಣ ಪೂಜೆಗಾಗಿ ಹೊರಟ ಕಲ್ಲಯ್ಯಗೌಡರ ಕುಟುಂಬದ ಅತ್ಯಂತ ಕಿರಿಯ ಪೀಳಿಗೆಯವರಾದ ತಿಮ್ಮ, ಕಾಡುವಿನ ಸಹಜ ಮುಗ್ಧ ಸಂಭಾಷಣೆಗಳಲ್ಲಿ ವೈದಿಕ ಕುಟುಂಬಗಳ ಅನೇಕ ಆಚರಣೆಗಳು ಬದುಕಿನ ರೀತಿ ನೀತಿಗಳು ಇತರ ಕೆಳವರ್ಗಕ್ಕಿಂತ ಭಿನ್ನವಾಗಿಯೂ, ಹಾಸ್ಯಾಸ್ಪದವಾಗಿಯೂ ಚಿತ್ರಿಸಲ್ಪಟ್ಟಿವೆ. ಗ್ರಾಮೀಣ ಮಕ್ಕಳ ಕುತೂಹಲಕಾರಿ ವೀಕ್ಷಣೆಯಿಂದ ವೈದಿಕ ಕುಟುಂಬಗಳ ಬದುಕಿನ ರೀತಿ ನೀತಿಗಳು ಇತರೆ ಕೆಳವರ್ಗಗಳಿಗಿಂತ ವೈದಿಕ ಕುಟುಂಬಗಳ ಬದುಕಿನ ಅನೇಕ ರೀತಿ ನೀತಿಗಳನ್ನು ಮುಖಾಮುಖಿಯಾಗಿಸಿ ವ್ಯಂಗ್ಯಕ್ಕೆ ಗುರಿಪಡಿಸುವ ಪ್ರಕ್ರಿಯೆಯಲ್ಲಿ ಪುರೋಹಿತಶಾಹಿ ಬಗೆಗಿನ ಪ್ರತಿರೋಧವನ್ನು ಈ ಭಾಗ ಪ್ರಮುಖವಾಗಿ ವಿಷದಪಡಿಸುವುದನ್ನು ಕಾಣುತ್ತೇವೆ.

"ಕೈ ಕಾಲು ಮುಖ ತೊಳೆದುಕೊಳ್ಳುವುದಕ್ಕೆ ಎಲ್ಲರೂ ಅಲ್ಲಲ್ಲಿ ದರಿಸಿ ಹಾಳಾಗಿದ್ದ ಮೆಟ್ಟಿಲುಗಳನ್ನು ಇಳಿಯುತ್ತಿದ್ದಾಗ ತಮ್ಮ ಅಮ್ಮನ "ಏ, ಬದಿಗೆ ನಿಂತುಕೊಳ್ರೋ, ಮಡಿಯಮ್ಮ ಬರ್ತಿದಾರೆ!" ಎಂಬ ಆಜ್ಞಾಧ್ವನಿಯನ್ನು ಕೇಳಿ, ಕಾಡು ತನ್ನ ಗೆಳೆಯರಿಬ್ಬರನ್ನು ಪಕ್ಕಕ್ಕೆ ಎಳೆದುಕೊಂಡು ನಿಂತನು. ಕೆಂಪು ಸೀರೆಯುಟ್ಟು, ನುಣ್ಣಗೆ ಬೋಳಿಸಿದ ಮಂಡೆಗೆ ಸೆರಗು ಮುಚ್ಚಿ, ಕೈಯಲ್ಲೊಂದು ಚೆನ್ನಾಗಿ ಬೆಳಗಿ ಥಳಥಳ ಹೊಳೆಯುತ್ತಿದ್ದ ತಾಮ್ರದ ತಂಬಿಗೆ ಹಿಡಿದು ಬರುತ್ತಿದ್ದ ಹೆಂಗಸೊಬ್ಬಳನ್ನು ಕಂಡು ತಿಮ್ಮ ಕೇಳಿದನು "ಯಾರೋ ಅದು?"

.....ಮತ್ತೆ ಕೇಳಿದನು ತಿಮ್ಮ ಮೆಲ್ಲಗೆ "ಯಾರೋ ಅದೂ? ಗಂಡಸೋ? ಹೆಂಗಸೋ?"

"ಹೆಂಗಸು ಕಣೋ! ಬೋಳುಹಾರ್ತಿ!..... ಅವಳ ಕಡೇನೇ ನೋಡಬ್ಯಾಡೋ, ಬಯ್ತಾಳಂತೆ" ಎಂದನು ಕಾಡು, ಆದಷ್ಟು ಮೆಲ್ಲಗೆ "...... ಹಾಗಂದ್ರೆ ?" ತಿಮ್ಮ ಪ್ರಶ್ನಿಸಿದನು. ಅವಳು ದೂರ ಹೋದ ಮೇಲೆ,

"ಬೋಳಮ್ಮ ಕಣೋ..... ಬೋಳು ಮುಂಡೆ!"

"ಛೇ ಯಾಕೋ ಬಯ್ತೀಯಾ?"

"ಏ...ೞ ಬಯ್ಯದಲ್ಲಿ ಕಣೋ, ಬ್ರಾಂಬ್ರಲ್ಲಿ ಗಂಡ ಸತ್ತ ಮುಂಡೇರಿಗೆ ಮಂಡೆ ಬೋಳಿಸ್ತಾರೆ, ಅದ್ಕೇ 'ಬೋಳುಮುಂಡೆ' ಅನ್ನಾದು!"

.....ಹೆದರಿ ಹೆದರಿ ಪ್ರಶ್ನಿಸಿದನು. "ಕಾಡಣ್ಣಯ್ಯ, ನಮ್ಮಲ್ಲಿಯೂ ಹೀಂಗೆ ಮಾಡ್ತಾರೇನೋ? ಗಂಡ ಸತ್ತರೆ?"

"ಥೂ ಥೂ ಥೂ! ಎಂಥಾ ಮಾತಾಡ್ತೀಯೋ? ನಮ್ಮಲ್ಲಿ ಯಾರಿಗೂ ಹೀಂಗೆ ಮಾಡಾದಿಲ್ಲೋ! ಬಾಂಬ್ರ ಜಾತೀಲಿ ಮಾತ್ರ ಹಂಗೆ ಮಾಡಾದು".

"ಸಧ್ಯ ನಾನೂ ನನ್ನವ್ವನೂ ಬಿರಾಂಬ್ರ ಜಾತೀಲಿ ಹುಟ್ಟದೆ ಗೌಡರ ಜಾತೀಲಿ ಹುಟ್ಟಿದ್ದೀವಲ್ಲಾ! ಮನಸ್ಸಿನಲ್ಲೇ ಅಂದುಕೊಂಡು ಧರ್ಮು ಹೊಳೆಯ ಅಂಚಿನ ತೆಳ್ಳೆ ನೀರಿಗಿಳಿದನು"೩

ಹೀಗೆ ಮಕ್ಕಳ ಸಹಜ ಸಂಭಾಷಣೆಯ ಮೂಲಕ ಪುರೋಹಿತಶಾಹಿಗಳಲ್ಲಿದ್ದ ಸಂಪ್ರದಾಯವನ್ನು ಕಾದಂಬರಿಕಾರರು ವಿಡಂಬಿಸುತ್ತಾರೆ. ಮಕ್ಕಳನ್ನು ಇಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿದ್ದ ಕುರುಡು ನಂಬಿಕೆಗಳನ್ನು ಟೀಕಿಸುವ ವಿಮರ್ಶಕರನ್ನಾಗಿಸಿದ್ದಾರೆ.

ಕುವೆಂಪು ಪುರೋಹಿತಶಾಹಿ ವ್ಯವಸ್ಥೆಯಲ್ಲಿದ್ದ ಕಂದಾಚಾರಗಳನ್ನು ವಿರೋಧಿಸಿದ್ದಷ್ಟೇ ಅಲ್ಲದೆ ಊಳಿಗಮಾನ್ಯ ವ್ಯವಸ್ಥೆಯಲ್ಲಿದ್ದ ಕಟ್ಟುಪಾಡುಗಳ ಬಗೆಗೂ ದನಿಯೆತ್ತಿದ್ದಾರೆ. ತಮಗಿಂತ ಕೆಳಗಿನವರನ್ನು ಅವರು ಹೇಗೆ ಶೋಷಣೆಗೆ ಒಳಪಡಿಸುತ್ತದ್ದರೆಂಬುದನ್ನು ಅವರ ಬಾಯಲ್ಲೇ ಹೇಳಿಸಿದ್ದಾರೆ.

"ಹೌದು ಕಣೋ! ನೋಡು, ಅದೇ ಹೊಳೆದಂಡೇಲಿ ಕಾಣ್ತಾ ಇದೆಯಲ್ಲಾ? ದೊಡ್ಡಮನೆ! ಅರ್ಧ ಮಂಗಳೂರು ಹೆಂಚು, ಅರ್ಧ ಓಡು ಹೆಂಚು ಹೊದಿಸಿದ್ದು? ಅದೇ ಕಲ್ಲೂರು ಸಾಹುಕಾರ್ರು ಮಂಜಭಟ್ಟರ ಮನೆ ಕಣೋ!" ಅಲ್ಲಿಗೆ ಬಂದಿದ್ದು ಸ್ಥಳ ಪರಿಚಯ ಪಡೆದಿದ್ದ ಕಾಡು ಹೇಳಿ, ಮತ್ತೆ ಮುಂದುವರೆದನು. "ಅಪ್ಪಯ್ಯನ ಸಂಗಡ ಒಂದು ಸಾರಿ ಕಲ್ಲೂರು ತೇರಿಗೆ ಬಂದಿದ್ದೆ ಕಣೋ, ಆಗ ಆ ಭಟ್ಟರ ಮನೇಲೇ ಊಟ ಮಾಡಿದ್ದು ನಾವು ಹೋಳಿಗೆ ಪಾಯಸ ಏನೇನೋ ಇಕ್ಕಿದ್ರು ಕಣೋ! ಆದರೆ, ಮನೆ ಒಳಗೆ ಬಳ್ಳೆ ಹಾಕಿರಲಿಲ್ಲ. ಹೊರಂಗಳದ ತೆಣೆ ಮೂಲೇಲಿ ಹಾಕಿದ್ರೊ! ನಂಗೆ ಇಸ್ಸಿ ಅನ್ನಿಸಿಬಿಟ್ಟಿತ್ತು!.....ಇನ್ನು ಎಂದೆಂದಿಗೂ ಅವರ ಮನೇಲಿ ಊಟ ಮಾಡಬಾರ್ದು ಅಂತ ಮಾಡಿಬಿಟ್ಟೇನಿ!".

ಇನ್ನು ಏನೇನು ಹೇಳುತ್ತಿದ್ದನೋ! ಕಾಡು, ಅಷ್ಟರಲ್ಲಿ ಅವನ ಅವ್ವ ದೊಡ್ಡಮ್ಮ ಹೆಗ್ಗಡತಿಯವರು "ಸಾಕು ಬಿಡೋ, ಮತ್ತೇನು ಬಿರಾಂಬ್ರ ಮನೇಲಿ ಗೌಡರ್ನ ಒಳಗೆ ಕೂರ್ಸಿ ಇಕ್ತಾರೆ ಅಂತಾ ಮಾಡೀಯೇನು? ನಮ್ಮನೇಲಿ ಆ ಕಿಲಸ್ತರ ಉಪದೇಶಿ ಬರ್ತನಲ್ಲ, ಅವನ್ನ ಒಳಗೆ ಕೂರ್ಸಿ ಊಟ ಹಾಕ್ತೀವೇನು? ಹಂಗೇನೆ ಬಿರಾಂಬರ ಮನೇಲಿ ನಮ್ಮನ್ನೆಲ್ಲ ಹೊರಗೇ ಕೂರಿಸಿ ಇಕ್ತಾರೆ" ಎಂದು ಬ್ರಾಹ್ಮಣ ಸಮರ್ಥನೆ ಮಾಡಿದರು"೪

ಕಲ್ಲಯ್ಯಗೌಡ, ರಂಗಪ್ಪಗೌಡ ಮೊದಲಾದ ಒಕ್ಕಲಿಗರಿಂದ ನಡೆಯುವ ಅತ್ಯಾಚಾರ ಶೋಷಣೆಗಳನ್ನು ಅನಾವರಣಗೊಳಿಸುತ್ತದೆ. ಒಟ್ಟಾರೆಯಾಗಿ "ಬ್ರಾಹ್ಮಣ-ಒಕ್ಕಲಿಗರ ಸಂದರ್ಭದಲ್ಲಿ ಕುವೆಂಪು ಶೂದ್ರರಾದ ಒಕ್ಕಲಿಗರ ಪರವಾಗಿರುತ್ತಾರೆ ಎನ್ನುವುದ ನಿಜ. ಆದರೆ ಒಕ್ಕಲಿಗೆ-ದಲಿತರ ಸಂದರ್ಭದಲ್ಲಿ ಅವರ ಧೋರಣೆಗಳು ದಲಿತರ ಪರವಾಗಿಯೇ ಇರುತ್ತವೆನ್ನುವುದು ವಾಸ್ತವ ಸತ್ಯ"[೫].

ಹಳೇಮನೆ ತಿಮ್ಮಪ್ಪ ಹೆಗ್ಗಡೆ ತಂದೆಯ ಆಜ್ಞೆಯಂತೆ ಹೊಲೆಯರ ಆಳುಗಳನ್ನು ಕೆಲಸಕ್ಕೆ ಕರೆಯಲು ಬರುತ್ತಾನೆ. "ಹೊಲಗೇರಿ ಹತ್ತಿರಕ್ಕೆ ಬಂದ ಹಾಗೆಲ್ಲ ಅದರ ಸಮ್ಮಿಶ್ರ ಶಬ್ದಪ್ರಪಂಚವೂ, ವಾಸನಾ ಪ್ರಪಂಚವೂ ಸ್ವಲ್ಪ ಹೆಚ್ಚು ಕಡಿಮೆ ಅಂತಹ ಪ್ರಪಂಚದಲ್ಲಿಯೇ ವಾಸಿಸುತ್ತದ್ದ ತಿಮ್ಮಪ್ಪ ಹೆಗ್ಗಡೆಗೂ ಮೂಗು ಮುಚ್ಚಿಕೊಳ್ಳುವಷ್ಟು ತೀವ್ರತರವಾಗಿ ಇಂದ್ರಿಯಗೋಚರವಾಗತೊಡಗಿತು. ಕೋಳಿ, ಕುರಿ, ನಾಯಿ, ಹಂದಿ, ಮನುಷ್ಯರು, ದನಕರುಗಳ ಮಧ್ಯೆ ಯಾವುದೇ ಭೇದವಿಲ್ಲದೆ ಇವೆಲ್ಲ ಪ್ರಾಣಿಗಳ ದುರ್ಗಂಧದ ಅವಿಭಕ್ತ ಕುಟುಂಬವ ವಾಯುವಲಯಕ್ಕೆ ಪ್ರವೇಶಿಸಿ, ಕೇರಿ ಪ್ರಾರಂಭವಾಗುವ ಸ್ಥಳಕ್ಕೆ ಸಮೀಪದಲ್ಲಿಯೇ ಅದರ ದ್ವಾರ ರಕ್ಷಣಾ ಪ್ರದೇಶವೆಂಬಂತೆ ಎತ್ತರವಾಗಿದ್ದ ಒಡೇರ ದಿಬ್ಬದ ಮೇಲೆ ನಿಂತು ತಿಮ್ಮಪ್ಪ ಹೆಗ್ಗಡೆ ವೀಕ್ಷಿಸತೊಡಗಿದನು"[೬].

ಮನುಷ್ಯ ಮತ್ತು ಪ್ರಾಣಿಜಗತ್ತಿನ ನಡುವೆ ಯಾವುದೇ ವ್ಯತ್ಯಾಸವಿಲ್ಲದೆ ಪ್ರಾಣಿಗಳೂ ಅವರ ಬದುಕಿನ ಅವಿಭಾಜ್ಯ ಅಂಗಗಳಾಗಿದ್ದವು ಎಂಬುದನ್ನು ಮೇಲಿನ ನಿದರ್ಶನದಲ್ಲಿ ಕಾಣಬಹುದು. ಈ ಏರ್ಪಾಡು ತಲೆತಲಾಂತರದಿಂದ ನಡೆದು ಬಂದಿತ್ತು. ಒಡೇರ ದಿಬ್ಬ ಎಂಬುದು ಒಡೆಯುರು ಬಂದು ನಿಲ್ಲುವ ಮೀಸಲು ಸ್ಥಳ. ಕೇರಿಯವರಿಗೂ, ಅವರ ಯಜಮಾನರಾಗಿದ್ದ ಒಕ್ಕಲಿಗರಿಗೂ ಪರಸ್ಪರರನ್ನು ಕಾಣಲು ಭೇಟಿಯಾಗಲು ನಿಗದಿತವಾದ ಸ್ಥಳವದು. ಪರಸ್ಪರರು ಅಸ್ಪೃಶ್ಯತೆಯನ್ನು ಕಾಪಾಡಿಕೊಂಡು ಬರಲು ಸಹಾಯಕವಾಗಿದ್ದ ಒಪ್ಪಂದದಂತೆ ಇದು ಕಾಣುತ್ತದೆ. ಒಟ್ಟಾರೆ ಇಲ್ಲಿ ಬಳಸಲಾಗಿರುವ ಹೆಗ್ಗಡೇರ ದಿಬ್ಬ ಮೇಲು-ಕೀಳು ಎಂಬ ಜಾತಿ ವ್ಯವಸ್ಥೆಯ ಸ್ಮಾರಕವಾಗಿರುವುದನ್ನು ಇಲ್ಲಿ ಪರೋಕ್ಷವಾಗಿ ವಿಡಂಬಿಸಲಾಗಿದೆ.

" 'ಹೆಗ್ಗಡೇರ ದಿಬ್ಬ'ದ ಮೇಲೆ ನಿಂತಿದ್ದ ಒಡೆಯರ ಆಗಮನವನ್ನು ಮೊತ್ತಮೊದಲು ಗಮನಿಸಿ, ಕೇರಿಗೆ ವರ್ತಮಾನ ಕೊಟ್ಟದ್ದು ಮರಿಹಾಕಿದ್ದ ಒಂದು ಕರಿನಾಯಿ, ಅದರ ಸುತ್ತಲೂ ಮುಲುಮುಲು ಓಡಾಡುತ್ತ ತಮ್ಮ ಬಡಕಲು ತಾಯಿಯ ಸೊರಗಿದ ಜೋಲು ಮೊಲೆಗಳನ್ನು ಚೀಪಿ ಜಗ್ಗಿಸುತ್ತಿದ್ದ ಕರಿಯ ಬಿಳಿಯ ಹಂಡಹುಂಡ ಮರಿಗಳು, ತಮ್ಮ ತಾಯಿಗೆ ಮತ್ತು ತಂದೆಯರಿಗೆ ಅನ್ನಾ ನೀರು ಹಾಕಿ ಸಾಕಿ ಸಲಹುತ್ತಿದ್ದ ಮನುಷ್ಯ ಯಜಮಾನರ ಬದುಕು-ಬಾಳು, ಆಗು-ಹೋಗು, ಜನನ-ಮರಣ, ಮದುವೆ-ಹಬ್ಬ, ಸಾಲ-ಸೂಲ ಎಲ್ಲಕ್ಕೂ ಬ್ರಹ್ಮ ವಿಷ್ಣು ಮಹೇಶ್ವರರಾಗಿದ್ದ ಹೆಗ್ಗಡೆಯವರಿಗೆ ಸಲ್ಲಬೇಕಾಗಿದ್ದ ಲಕ್ಷ್ಯವನ್ನಾಗಲೀ, ಭಯ ಭಕ್ತಿ ಗೌರವಗಳನ್ನಾಗಲಿ ಒಂದಿನಿತೂ ಸಲ್ಲಿಸದೆ ಜೋಲು ಮೊಲೆಗಳನ್ನು ಜಗ್ಗಿ ಸೆಳೆದು ಚೀಪುತ್ತಿದ್ದವು."[೭] ಈ ಉದಾಹರಣೆಯು ದಲಿತರ ಕೇರಿಯ ಬಡತನದ ಬದುಕಿಗೆ ಹಿಡಿದ ಕನ್ನಡಿಯಂತಿದೆ.

ಸಹಜ ಸನ್ನಿವೇಶವಾದ ತಾಯಿನಾಯಿ ಮತ್ತು ಮರಿಗಳ ವರ್ತನೆಯ ವರ್ಣನೆ ಹೊಲಗೇರಿಯ ದೊಡ್ಡವರ ಮತ್ತು ಮಕ್ಕಳ ಸ್ಥಿತಿಗತಿಗಳನ್ನು ಧ್ವನಿಸುವ ಸಶಕ್ತ, ಪ್ರತಿಮೆಯಾಗಿರುವುದನ್ನು ಕಾಣಬಹುದು. ಆದರಲ್ಲೂ ಬಡಕಲು ತಾಯಿಯ ಸೊರಗಿದ 'ಜೋಲು ಮೊಲೆಗಳನ್ನು' ಎಂಬ ಮಾತು ಹೊಲೆಯರ ಬಡತನದ ಶೋಚನೀಯಾವಸ್ಥೆಗೆ ಬರೆದ ಭಾಷ್ಯದಂತಿದೆ. ಮರಿಗಳು ತಾಯಿಗೆ ಮತ್ತು ತಂದೆಯರಿಗೆ ಎಂಬಲ್ಲಿ ಸೂಕ್ಷ್ಮ ನಿರೀಕ್ಷಣಾ ಶಕ್ತಿಯ ಅಗಾಧತೆಯನ್ನು ಕಂಡು, ಕಂಡರಣೆಯಲ್ಲಿ ಎಚ್ಚರ ತಪ್ಪಿರುವುದನ್ನು ಕಂಡು ವಿಸ್ಮಯವಾಗುತ್ತದೆ.

ಇಡೀ ಪ್ಯಾರಾ ಹೊಲಗೇರಿಯ ಚಿತ್ರಣವನ್ನು ಕೊಡುವ ವ್ಯಾಖ್ಯಾನದಂತೆ ಕಂಡರೂ, 'ಜೋಲು ಮೊಲೆಗಳನ್ನು ಚೀಪುತ್ತಿದ್ದವು' ಎಂಬುದು ಹೊಲಗೇರಿಯ ಚಿಂತಾಜನಕ ಸ್ಥಿತಿ, ಒಡೆಯನಿಗಾಗಿ ತನ್ನೆಲ್ಲವನ್ನೂ ಕೊನೆಗಾಣಿಸಿಕೊಳ್ಳುವ ಕೂಲಿಯಾಳುಗಳ ಪರಿಸ್ಥಿತಿ ಎಲ್ಲವನ್ನು ರಜತ ಪರದೆಯ ಮೇಲೆ ಕಾಣುವ ಚಿತ್ರದಷ್ಟೇ ಸುಸ್ಪಷ್ಟವಾಗಿಸುವ ಇದೊಂದು ಸಶಕ್ತ ಸಂಕೇತ ಎಂಬುದು ಯಾರೂ ಒಪ್ಪಬೇಕಾದ ಮಾತೆನಿಸುತ್ತದೆ.

ಕೆಳವರ್ಗದವರ ಶೋಷಣೆಗೆ ಮತ್ತೊಂದು ಪ್ರಮುಖವಾದ ಕಾರಣ ಅವರಲ್ಲಿ ಮನೆಮಾಡಿದ್ದ ಅಜ್ಞಾನ ಮತ್ತು ಮೂಢನಂಬಿಕೆ, ಹೊಲೆಯರ ಕೇರಿಗೆ ಹೋಗುವುದು ತಮ್ಮ ಮೇಲ್ಮೈಗೆ ಕುಂದು ಎಂದು ಒಕ್ಕಲಿಗರು ಭಾವಿಸಿದರೆ, ಉತ್ತಮರು ತಮ್ಮ ಕೇರಿಗೆ ನುಗ್ಗಿದರೆ ಅನಾಹುತವಾಗುತ್ತದೆಂದು ಹೊಲೆಯರು ಭಾವಿಸಿದ್ದರು. ತಿಮ್ಮಪ್ಪ ಹೆಗ್ಗಡೆಯ ಒಂದೆರಡು ಕೂಗುಗಳಿಗೆ ತಮ್ಮ ಕೇರಿಯ ಜನರಾರೂ ಉತ್ತರಿಸುವ ಗೋಜಿಗೆ ಹೋಗದಿರುವುದನ್ನು ಕಂಡು ಹಿರಿಯನಾದ ಕುಳವಾಡಿ ಸಣ್ಣ ಆತಂಕಕ್ಕೀಡಾಗುತ್ತಾನೆ.

ಹೆಗ್ಗಡೆಯವರೇನಾದರೂ ಆಕಸ್ಮಾತ್ ಕೇರಿಯನ್ನು ಪ್ರವೇಶಿಸಿದರೆ ತಮ್ಮ ಕೇರಿಯೇ ನಾಶವಾಗುತ್ತದೆಂದೂ, ದೆವ್ವ, ದೇವರುಗಳಿಗೆ ಅಸಾಧ್ಯ ಕೋಪ ಬರುತ್ತದೆಂದೂ ಚಿಂತಿಸುತ್ತಾನೆ. ಮೇಲುಜಾತಿಯವರು ಪ್ರವೇಶಿಸಿದರೆ ಕೇರಿ ಉಳಿಯದೆಂದು ಆತ ಮಗಳಿಗೆ ಸ್ಪಷ್ಟವಾಗಿಯೇ ಹೇಳುತ್ತಾನೆ. ಒಕ್ಕಲಿಗರ ಮನೆಗೆ ಹೊಲೆಯರು ಬರಬಾರದೆಂದರೆ, ಹೊಲೆಯರ ಕೇರಿಗೆ ಒಕ್ಕಲಿಗರು ಕಾಲಿಡುವಂತಿಲ್ಲ ಎಂಬುದು ಕಾದಂಬರಿಯ ಚಿತ್ರಣದಿಂದ ಸ್ಪಷ್ಟವಾಗುತ್ತದೆ.

ಇಲ್ಲಿ ಗಮನಿಸಬೇಕಾದ ಇನ್ನೊಂದು ಸಂಗತಿಯೆಂದರೆ, ಜಾತೀಯತೆಯಾಗಲೀ, ಅಸ್ಪೃಶ್ಯತೆಯಾಗಲೀ ಏಕಪಕ್ಷೀಯವಾಗಿರದೆ ಮೇಲಿನಿಂದ ಕೆಳಕ್ಕು, ಕೆಳಗಿನಿಂದ ಮೇಲಕ್ಕು ಸಮಾಜದಲ್ಲಿ ದ್ವಿಮುಖ ಚಲನೆಯನ್ನು ಪಡೆದಿತ್ತು. ಜಾತೀಯತೆಯ ಆಚರಣೆ ಘೋರವೆಂಬುದಾಗಲಿ, ಮಾನವೀಯತೆಗೆ ಬಗೆಯುವ ಅಪಚಾರವೆಂಬುದಾಗಲಿ ಭಾವಿಸುವುದನ್ನು ಇಲ್ಲಿ ಕಾಣಲಾರೆವು. ತಲೆಮಾರುಗಳಿಂದ ಹಾಯ್ದು ಬಂದ ಕಟ್ಟಲೆಗಳಿಗೆ ತಮ್ಮನ್ನು ಒಪ್ಪಿಸಿಕೊಂಡ ಜನರನ್ನು ಇಲ್ಲಿ ಕಾಣಬಹುದು. ಅಂದರೆ ಮೇಲ್ವರ್ಗದವರು ತಮ್ಮನ್ನು ಕೀಳಾಗಿ ಕಾಣುವುದು ತಮಗಾಗುವ ಶೋಷಣೆ ಎಂಬ ಅರಿವೂ ಅವರಲ್ಲಿಲ್ಲ. ಪರಂಪರಾನುಗತವಾಗಿ ಬಂದ ನಂಬಿಕೆ ಎಂಬುದು ಅವರ ತಿಳುವಳಿಕೆ.

ತಿಮ್ಮಪ್ಪ ಹೆಗ್ಗಡೆ ಆಳುಗಳ ಕೇರಿಗೆ, ಹೋದಾಗ ಬರುವ ಮಂಜ, ಸಿದ್ದ, ತಿಮ್ಮ, ಗಿಡ್ಡಿ, ಕುಳವಾಡಿ ಸಣ್ಣ, ಭೈರ ಮುಂತಾದವರ ಸಂಸಾರ ಚಿತ್ರಗಳು, ಕೋಣೂರಿನ ಚೀಂಕ್ರ, ಪಿಜಣ, ಐತ, ಮೊಡಂಕಿಲ, ದೇಯಿ, ಅಕ್ಕಣಿ, ಬಾಗಿ, ಪೀಂಚಲುವಿನ ಚಿತ್ರಗಳು ಕಾದಂಬರಿಯಲ್ಲಿ ತುಂಬಿಕೊಳ್ಳುವ ಮೂಲಕ ಆಗುವ ಉದ್ದೇಶ ಸಾಧನೆಯನ್ನು ಗಮನಿಸಬೇಕು. ಈ ಪಾತ್ರಗಳೇ ಅಲ್ಲದೆ ಬೆಟ್ಟಳ್ಳಿಯ ಸಣ್ಣಬೀರ, ಪುಟ್ಟಬೀರ, ದೊಡ್ಡಬೀರ, ಬಚ್ಚ, ಸೇಸಿ, ಸಿಂಬಾವಿಯ ಮರಾಟಿ ಮಂಜ, ಹಾಗೂ ಕಾದಂಬರಿಯ ಪ್ರಮುಖಪಾತ್ರವಾದ ಗುತ್ತಿ ಮುಂತಾದ ಪಾತ್ರಗಳ ಮೂಲಕ ರೂಪುಗೊಳ್ಳುವ ಜನಜೀವನದ ಮೂಲಕವೂ ಕಾದಂಬರಿಕಾರರು ನಿಯೋಜಿಸಿರುವ ಪರಿಣಾಮವೇನುಂಬುದನ್ನು ಗಮನಿಸಬಹುದು.

ಜಾತಿ ವ್ಯವಸ್ಥೆಯ ಅನುಸರಣೆ ಕೇವಲ ಹಿರಿಯರಿಗಷ್ಟೇ ಸೀಮಿತವಾಗಿರಲಿಲ್ಲ. ಜಾತೀಯತೆಯ ಬಗೆಗೆ ಮಕ್ಕಳಿಗೂ ಬಾಲ್ಯದಿಂದಲೇ ಅರಿವನ್ನು ಮೂಡಿಸುವ ವಾಡಿಕೆ ಇತ್ತು. ಅಂದರೆ ಮೇಲುವರ್ಗಕ್ಕೆ ಸೇರಿದ ಮಕ್ಕಳಲ್ಲೂ ಕೆಳವರ್ಗದ ಬಗೆಗಿದ್ದ ಕೀಳರಿಮೆಯನ್ನು ಕೆಳಗಿನ ನಿದರ್ಶನದಿಂದ ಕಾಣಬಹುದು. " ಮದುವೆ ಮನೆಯಲ್ಲಿ ವಾಲಗ, ಊದುತ್ತಿರುವವನು ಹೊಲೆಯರವನು ಎಂದು ತಿಳಿದಾಗ ಅದುವರೆವಿಗೂ ಕುತೂಹಲದಿಂದ ನೋಡುತ್ತಿದ್ದ ಹುಡುಗರು ತಮ್ಮ ಗೌಡಿಕೆಯ ಗೌರವಕ್ಕೆ ಮಸಿ ಬಳಿದಂತಾಯಿತೆಂದು ತಿಳಿದು ಮುಖ ಸಣ್ಣಗೆ ಮಾಡಿಕೊಂಡು "ಥೂ, ಬನ್ರೋ! ಈ ಬಡು ತಿನ್ನೋರ ವಾಲಗ ಏನು ಕೇಳಾದು!"೮ ಎಂದು ದೂರ ಹೋಗುತ್ತಾರೆ.

ಇಂಪಾಗಿದ್ದ ವಾಲಗದ ಸ್ವರ ಹೊಲೆಯರು ಅಂದ ಕೂಡಲೇ ಆ ಹುಡುಗರಿಗೆ ಕರ್ಕಶವಾಗಿ ತಿರಸ್ಕಾರವಾಗಿ ಕಂಡುಬಂದಿತು. ಇದೇ ರೀತಿಯ ಮತ್ತೊಂದು ಉದಾಹರಣೆಯನ್ನು ........... ಮುಕುಂದಯ್ಯನವರ ಸಂಭಾಷಣೆಯ ಸಂದರ್ಭದಲ್ಲಿ ಕಾಣಬಹುದು. ಬಿಲ್ಲವರ ಪೀಂಚಲು ಮುಟ್ಟಿದ ಹೊಂಬಾಳೆಯನ್ನು ಮುಕುಂದಯ್ಯ ಊಟ ಮಾಡಲು ಕೇಳಿದಾಗ, ಐತ ಮುಕುಂದಯ್ಯನನ್ನು ಕುರಿತು "ಬ್ಯಾಡ ಅಯ್ಯ ಇವಳು ಮುಟ್ಟಬಿಟ್ಟಿದ್ದಾಳೆ"೯ ಎನ್ನುತ್ತಾನೆ.

ಹಿಂದೂ ಧರ್ಮದಲ್ಲಿ ಮೇಲ್ವರ್ಗವು ತನ್ನ ಸೇವಾಕಾರ್ಯಗಳಲ್ಲಿ ಶೂದ್ರರನ್ನು ದುಡಿಸಿಕೊಳ್ಳುವ ಸಲುವಾಗಿಯೇ ಶೂದ್ರರಲ್ಲಿ ಮೌಢ್ಯ ವಿಚಾರಗಳನ್ನು ತುಂಬಿದುದು ಕಾದಂಬರಿಯಲ್ಲಿ ವೇದ್ಯವಾಗುತ್ತದೆ.

"ಅಜ್ಞರೂ ಮೌಢ್ಯಾಂಧರೂ ಆಗಿದ್ದ ಶೂದ್ರವರ್ಗದ ಸಾಮಾನ್ಯ ಜನರಿಂದ ಪಾದಪೂಜೆ ಮಾಡಿಸಿಕೊಳ್ಳುತ್ತಿದ್ದರು. ಅಡ್ಡಪಲ್ಲಕ್ಕಿ ಸೇವೆ ಸಲ್ಲಿಸಿಕೊಳ್ಳುತ್ತಿದ್ದರು. ದಾನ, ದಕ್ಷಿಣೆ, ಸಾಷ್ಟಾಂಗ ನಮಸ್ಕಾರಗಳನ್ನು ಸ್ವೀಕರಿಸುತ್ತಿದ್ದರು. ಆಶೀರ್ವಾದ ಮಾಡುತ್ತಿದ್ದರು.! ತಮ್ಮ ತಮ್ಮ ಪಂಗಡಕ್ಕೆ ಸೇರಿದ ಬ್ರಾಹ್ಮಣೋತ್ತಮರಿಗೆ, ಭೂಸುರರಿಗೆ, ಸಮಾರಾಧನೆ ಮಾಡಿಸಿ ಹೊಟ್ಟೆ ತುಂಬಿಸುತ್ತಿದ್ದರು. ಬಹುಶಃ ಶಾಸ್ತ್ರಕ್ಕಾಗಿ, ತಮ್ಮ ವರ್ಗಕ್ಕೆ ಸೇರಿದ ವಿದ್ವಾಂಸರನ್ನು ನೆರಪಿ ವಾಕ್ಯಾರ್ಥ ಏರ್ಪಡಿಸುತ್ತಿದ್ದರೂ ಇರಬಹುದು. ಶೂದ್ರರು ವೇದೋಪನಿಷತ್ತುಗಳನ್ನು ಓದುವುದಿರಲಿ, ಕೇಳಿದರೂ ಅವರ ಕಿವಿಗೆ ಸೀಸ ಕರಗಿಸಿ ಹೊಯ್ಯುವ ನರಕ ಶಿಕ್ಷೆಯನ್ನು ವಿಧಿಸಿ, ಅದಕ್ಕೆ ಧರ್ಮಶಾಸ್ತ್ರವೆಂದು ಹೆಸರಿಟ್ಟರು. ಶೂದ್ರರಿಗೆ ವೇದಾಂತ ಬೋಧನೆ ಮಾಡುವ ಪಾಪಕ್ಕೆ ಏಕೆ ಪಕ್ಕಾಗುತ್ತಾರೆ"೧೦.

ಅಂದರೆ ಶೂದ್ರನೊಬ್ಬ ಶಿಕ್ಷಣ ಪಡೆಯುವುದು ಮಹಾಪಾಪ ಎಂಬ ಧೋರಣೆಯನ್ನು ಶೂದ್ರರಲ್ಲಿ ಬಿತ್ತಿ, ಶಿಕ್ಷಣದಿಂದ ವಂಚಿತರನ್ನಾಗಿ ಮಾಡಲು ಶಾಸ್ತ್ರಗಳನ್ನು ಮುಂದಿಟ್ಟ ಪುರೋಹಿತಷಾಹಿ ವ್ಯವಸ್ಥೆಯನ್ನು ಕುವೆಂಪು ಇಲ್ಲಿ ತೀವ್ರವಾಗಿ ಪ್ರಶ್ನಿಸುತ್ತಾರೆ.

ಒಕ್ಕಲಿಗರು ದಲಿತರನ್ನು ಹೇಗೆ ನಡೆಸಿಕೊಳ್ಳುತ್ತಿದ್ದರೋ ಹಾಗೇ ಬ್ರಾಹ್ಮಣರಿಂದ ಇವರು ನಡೆಸಿಕೊಳ್ಳಲ್ಪಡುತ್ತಿದ್ದರು. ಬ್ರಾಹ್ಮಣರ ಜತೆ ಅವರಿಗೆ ಸಹಪಂಕ್ತಿ ಇಲ್ಲ. ಅಂದರೆ ಯಾರು ಎಲ್ಲಿ ಕೂಡಬೇಕು, ಎಲ್ಲಿ ನಿಲ್ಲಬೇಕು, ಎಲ್ಲಿ ಊಟ ಮಾಡಬೇಕು, ಎಲ್ಲಿ ಮಲಗಬೇಕು, ಯಾರು ಯಾರನ್ನು ಎಷ್ಟು ಮುಟ್ಟಿಸಿಕೊಳ್ಳಬಹುದು ಮುಂತಾದ ಜಾತಿ ಸೂಕ್ಷ್ಮಗಳನ್ನು ಕಾದಂಬರಿಯು ದಟ್ಟವಾಗಿ ಚಿತ್ರಿಸಿದೆ.

ಹೆಗ್ಗಡೆಯವರನ್ನು ಕಂಡೊಡನೆ ದಲಿತ ಗಂಡಾಳುಗಳು ಹೊಟ್ಟೆ ಅಡಿಯಾಗಿ ಮಣ್ಣು ಹಣೆ ಮುಟ್ಟುವಂತೆ ಎಲ್ಲಿ ಅಂದರಲ್ಲಿ ನಿಂತಿದ್ದ ಎಡೆಯಲ್ಲಿಯೇ ಮುಳ್ಳು ಪೊದೆಯೆಂಬುದನ್ನು ಲೆಕ್ಕಿಸದೆ ಅಡ್ಡ ಬೀಳುತ್ತಾರೆ. ಹೆಣ್ಣಾಳುಗಳಂತೂ ಒಡೆಯರ ಕಣ್ಣಿಗೆ ನೇರವಾಗಿ ಬಿದ್ದರೆ ಅವರಿಗೆಲ್ಲಿ ಮೈಲಿಗೆ ಸೋಕುವುದೋ ಎಂದು ಹೆದರಿ ಹಳುವಿನಲ್ಲಿ ಮರೆಯಾಗುತ್ತಾರೆ. ಇದು ಕೆಳವರ್ಗದವರಿಗೆ ತಮ್ಮ ಬಗೆಗಿದ್ದ ಕೀಳರಿಮೆ ಮೇಲ್ವರ್ಗದವರ ಬಗೆಗಿದ್ದ ವಿಧೇಯತೆ, ಮುಗ್ಧತೆ, ಪರಿಶುದ್ಧ ಮನಸ್ಥಿತಿಗಳನ್ನು ಪ್ರತಿಬಿಂಬಿಸುತ್ತದೆ.

ಮೇಲಿನ ಮಾತುಗಳಿಗೆ ನಿದರ್ಶನವೆಂಬಂತೆ ಅಸ್ವಸ್ಥರಾಗಿ ಐಗಳು ಅನಂತಯ್ಯನವರ ಮೇಲೆ ಒರಗಿದ ಸುಬ್ಬಣ್ಣ ಹೆಗ್ಗಡೆಯವರನ್ನು ಹಿಡಿದುಕೊಳ್ಳಲು ಅಪ್ಪಣೆ ಕೊಟ್ಟರೂ ಹೊಲೆಯರು ಹೆದರಿ ಹೆದರಿ "ವಿಷಸರ್ಪ ನುಗ್ಗಿದ ಗರ್ಭಗುಡಿಗೆ ಬ್ರಾಹ್ಮಣ ಪೂಜಾರಿ ಹಾವನ್ನು ಹೊಡೆದು ತನ್ನನ್ನು ಕಾಪಾಡಿ ಎಂದು ಆರ್ತನಾದದಿಂದ ಆಹ್ವಾನಿಸಲು ಅಂಜಿ ಅಂಜಿ ಒಳನುಗ್ಗುವ ದಂಡದಾರಿ ಶೂದ್ರರಂತೆ ಹೆಗ್ಗಡೆಯವರನ್ನು ಹಿಡಿದುಕೊಳ್ಳುತ್ತಾರೆ."೧೧

ಹೊಲೆಯ ಪಾತ್ರಗಳು ಮೇಲುಜಾತಿಯವರ ಬಗ್ಗೆ ತಮಗಿರುವ ಹೆದರಿಕೆಯನ್ನು ವ್ಯಕ್ತಪಡಿಸುತ್ತವೆ. ಇದನ್ನು ಉಚ್ಚವರ್ಗದ ಬರಹಗಾರರು ಗಮನಿಸಿದಂತೆ ಕಾಣುವುದಿಲ್ಲ. ಆದರೆ ಕುವೆಂಪು ಹೊಲೆಯರ ಪ್ರತಿಕ್ರಿಯೆಗಳನ್ನು ದಾಖಲು ಮಾಡುತ್ತಾರೆ. ಮನಷ್ಯರೆಂದ ಮೇಲೆ ಅವರ ಸ್ಥಾನಮಾನ ಏನೇ ಇರಲಿ ಬೇರೆಯವರ ದೋಷ ದೌರ್ಬಲ್ಯಗಳನ್ನು ಕಂಡಾಗ ಆಡಿಕೊಳ್ಳುವುದು ಸ್ವಾಭಾವಿಕ. ಲೇಖಕರು ತಿಮ್ಮಪ್ಪ ಹೆಗ್ಗಡೆಯ ನೀಚತನವನ್ನು ದಲಿತರ "ಯಾರಿಗೇನು ಗೊತ್ತಿಲ್ವೇನೋ ಇವರ ಹಣೆಬರಾ..... ಹೆಣ್ಣಾತಿಯಾಗ್ಬಿಟ್ರೆ ಆತು"೧೨ ಎಂಬ ಮಾತಿನಲ್ಲಿ ಆತ ಅವರಿಗಿಂತಲೂ ನೀತಿಯಲ್ಲಿ ಕೀಳೆಂಬುದನ್ನು ಚಿತ್ರಿಸಿದ್ದಾರೆ.

ಕಾದಂಬರಿಯಲ್ಲಿ ಲೇಖಕರು ಯಾರನ್ನೂ ವೈಭವೀಕರಿಸುವುದಿಲ್ಲ. ಬದಲಾಗಿ ಸಾಧ್ಯವಾದಷ್ಟು ಬಹುಕೋನಗಳಲ್ಲಿ ಬಹು ದೃಷ್ಟಿ ಧ್ವನಿಗಳಲ್ಲಿ ಜಾತಿ ವ್ಯವಸ್ಥೆಯನ್ನು ಚಿತ್ರಿಸುವ ಮಹತ್ವಾಕಾಂಕ್ಷೆಯನ್ನು ಇಲ್ಲಿ ಕಾಣಬಹುದಾಗಿದೆ. ಜಾತಿ ವ್ಯವಸ್ಥೆಯ ಇಕ್ಕಟ್ಟುಗಳನ್ನು ಕಾದಂಬರಿ ಕೇವಲ ಒಕ್ಕಲಿಗ ಪಾತ್ರಗಳ ದೃಷ್ಟಿಕೋನದಿಂದ ನೋಡಿಲ್ಲ ಎಂಬುದನ್ನು ಗಮನಿಸಹುದು.

ಚಿನ್ನಮ್ಮನ ಮದುವೆಯ ಸಂದರ್ಭದಲ್ಲಿ "..........ಅವರನ್ನೆಲ್ಲ ಕರೆದುಕೊಂಡು ಹೋಗಿ ಹೊರಗಿನ ಕೀಳು ಜಾತಿಯ ಜನರು ಕೂತಿದ್ದ ಪಂಕ್ತಿಯಲ್ಲಿ ಹೆಂಗಸರ ನಡುವೆ ಕೂರಿಸಿದನು.

ಅಷ್ಟರಲ್ಲಿ ಯಾರೋ ಕೂಗಿದರು. "ಹಸಲೋರು ಅಲ್ಲಿ ಕೂರಬೇಕು, ಇಲ್ಲಲ್ಲಾ! ಏಳಿ ಹೆಂಗಸ್ರೆಲ್ಲಾ!.........."

"ಹಸಲೋರೇನು ಬಿಲ್ಲೋರಿಗಿಂತ ಕೀಳೆಲ್ಲ ಜಾತೀಲಿ ನೀನೆ ಬೇಕಾದರೆ ಎದ್ದು ಹೋಗು! ಚೀಂಕ್ರ ಪ್ರತಿಭಟಿಸಿದನು."೧೩

ಒಕ್ಕಲಿಗರಿಗೂ ಹಳೆ ಪೈಕದವರಿಗೂ ಇದ್ದ ಸಂಘರ್ಷವನ್ನು ಹಾಗು ಒಬ್ಬರು ಇನ್ನೊಬ್ಬರಿಂದ ಜಾತಿಯ ಶ್ರೇಣೀಕರಣದಲ್ಲಿ ಹಂತ ಹಂತವಾಗಿ ಶೋಷಣೆಗೆ ಒಳಗಾಗುವುದನ್ನು ಇಲ್ಲಿ ಕಾಣಬಹುದು. "ವೇದ ಕಲಿಯುವುದು ಶೂದ್ರರಿಗೆ ಹೇಗೆ ನಿಷಿದ್ಧವೋ ಹಾಗೆಯೇ ಸ್ವಂತ ಜಮೀನು ಮಾಡುವುದು ಹಳೆ ಪೈಕದವರಿಗೆ ನಿಷಿದ್ಧ ಎಂದು ಒಕ್ಕಲಿಗರಾಗಿದ್ದ ಹೆಗ್ಗಡೆ ಗೌಡ ನಾಯಕರುಗಳೆಲ್ಲ ಸೇರಿ ತೀರ್ಮಾನಿಸಿದ್ದರು. ಅಷ್ಟೇ ಅಲ್ಲದೆ, ಮದುವೆ ಮೊದಲಾದ ಸಂದರ್ಭಗಳಲ್ಲಿ ಹಳೆ ಪೈಕದವರು ಒಕ್ಕಲಿಗರನ್ನು ಯಾವುದೇ ವಿಧದಲ್ಲಿಯೂ ಅನುಕರಿಸಕೂಡದೆಂದು ಮಾಮೂಲು ಕಟ್ಟಾಗಿತ್ತು. ದಿಬ್ಬಣದಲ್ಲಿ ಮದುವೆಯ ಗಂಡು ಕುದುರೆಯ ಮೇಲೆ ಸವಾರಿ ಮಾಡುವಂತಿಲ್ಲ, ದಂಡಿಗೆಯ ಮೇಲೆ ಕೂತರಂತು ಮದುಮಕ್ಕಳಿಗೂ ದಿಬ್ಬಣದವರಿಗೂ ಉಳಿಗಾಲವಿರಲಿಲ್ಲ"೧೪ ಇದು ಜಾತಿ ವ್ಯವಸ್ಥೆಯ ಮತ್ತೊಂದು ಕ್ರೂರ ಮುಖವನ್ನು ಪರಿಚಯಿಸುತ್ತದೆ.

ಸಾಮಾಜಿಕ ಶ್ರೇಣಿಯ ವಿವಿಧ ಜಾತಿಗಳಿಗೆ ಸೇರಿದ ಕೆಲವು ಪಾತ್ರಗಳ ಮುಂದೆ ಉಂಟಾದ ಪ್ರಸಂಗದಲ್ಲಿ ವಿಭಿನ್ನ ಜಾತಿಗಳ ಪಾತ್ರಗಳು ಕಾದಂಬರಿಯಲ್ಲಿ ಹೇಗೆ ಪ್ರವಹಿಸುತ್ತವೆ ಎಂಬುದರ ಸ್ಥೂಲ ವಿವೇಚನೆಯನ್ನು ಇಲ್ಲಿ ಕಾಣಬಹುದು. ಈ ಕಾದಂಬರಿಯಲ್ಲಿ ಬರುವ ಮುಖ್ಯ ಪಾತ್ರಗಳಲ್ಲಿ ಒಂದು ಗುತ್ತಿಯದು, ಇನ್ನೊಂದು ಮುಕುಂದಯ್ಯನದು. ಗುತ್ತಿಯ ನಾಯಿಯೂ ಸೇರಿದಂತೆ ಒಟ್ಟು ಮೂರು ಪಾತ್ರಗಳ ನಡುವೆ ಉಂಟಾಗುವ ಘಟನೆಯೊಂದನ್ನು ಇಲ್ಲಿ ಸ್ಮರಿಸಬಹುದು.

ಮನಸ್ಸಿಲ್ಲದ ಮನಸ್ಸಿನಿಂದ ಗುತ್ತಿ ತನ್ನ ನಾಯಿಯನ್ನು ಮುಕುಂದಯ್ಯನಿಗೆ ಕೊಡುತ್ತಾನೆ. ಅದಕ್ಕೆ ಪ್ರತಿಯಾಗಿ ಮುಕುಂದಯ್ಯ ಗುತ್ತಿ ಬೇಡವೆಂದರೂ "ಒಂದು ಹೊಸ ಹೆಗ್ಗಂಬಳಿ, ಒಂದು ಹಳೆಯದಾದರೂ ಚೆನ್ನಾಗಿದ್ದ ಕಿಸೆ ಅಂಗಿ, ಒಂದಿಷ್ಟು ಎಲೆ, ಅಡಿಕೆ, ಹೊಗೆಸೊಪ್ಪು ಒಂದು ರೂಪಾಯಿ ಇವುಗಳನ್ನು ಕೊಡುತ್ತಾನೆ."೧೫ ಇವಿಷ್ಟನ್ನು ಪಡೆದು ಅಲ್ಲಿಂದ ಹಿಂದಿರುಗಿ ಹೋಗುವ ಗುತ್ತಿ ಕೇವಲ ಅನತಿ ಕಾಲದಲ್ಲೇ ತೀವ್ರ ದುಃಖತಪ್ತನಾಗಿ ನಾಯಿಯನ್ನು ಕಳೆದುಕೊಂಡು ಎದೆಯ ಬೇಗುದಿಯನ್ನು ತಾಳಲಾರದೆ ಹಿಂದುರುಗಿ ಬಂದು ಮುಕುಂದಯ್ಯನ ಮನೆಯ ಬಾಗಿಲಲ್ಲಿ ನಿಂತು ಹೇಳುತ್ತಾನೆ.

"ನನಗೆ ನಾಯಿಯನ್ನು ಕೊಡದಿದ್ದರೂ ಚಿಂತೆಯಿಲ್ಲ, ಅದನ್ನು ಮಾರಿಬಿಟ್ಟೆ ಎಂದು ಮನಸ್ಸಿಗೆ ಇಸ್ಸಿ ಆಗಬಾರದು. ಆದ್ದರಿಂದ ನಿಮ್ಮ ಕಾಲಿಗೆ ಬಿದ್ದು ಬೇಡಿಕೊಳ್ಳುತ್ತೇನೆ. ಈ ಸಾಮಾನ್ನೆಲ್ಲ ಹಿಂದಕ್ಕೆ ತೆಗೆದುಕೊಳ್ಳಿ' ಎಂದು ತಟಕ್ಕನೆ ಹಿಂದಿರುಗಿ ಅಲ್ಲೇ ನಿಲ್ಲದೆ ಹುಲಿಯಾನ ಊಳನ್ನೂ ಗೋಳನ್ನೂ ಇನಿತು ಗಮನಿಸದಂತೆ ನಡೆದುಬಿಟ್ಟನು"೧೬. ಈ ಘಟನೆಯಲ್ಲಿ ನಾವು ಗಮನಿಸಬೇಕಾದ ಕೆಲವು ಸಂಗತಿಗಳಿವೆ. ಉದಾ: ಕೋಣೂರು ಜಮೀನ್ದಾರನಾದ ರಂಗಪ್ಪಗೌಡರ ಮಗನಾದ ಮುಕುಂದಯ್ಯನು ನಾಯಿ ತನಗೆ ಬೇಕೆಂದು ಪೀಡಿಸಿದಾಗ, ಅಸ್ಪೃಶ್ಯನೂ ಒಕ್ಕಲಿಗರ ಜೀತಗಾರನೂ ಆದ ಗುತ್ತಿ ಅದಕ್ಕೆ ವಿರುದ್ಧನಾಗಿ ವರ್ತಿಸುವಂತಿರಲಿಲ್ಲ. ಅಂತೆಯೇ ತನ್ನ ನಾಯಿಯನ್ನು ಮುಕುಂದಯ್ಯನಿಗೆ ಕೊಡಲೊಪ್ಪಿದನು. ನಾಯಿಯನ್ನು ಹಾಗೆ ಮುಕುಂದಯ್ಯನಿಗೆ ಕೊಟ್ಟ ಗುತ್ತಿ ಅದಕ್ಕೆ ಪ್ರತಿಯಾಗಿ ಮುಕುಂದಯ್ಯನಿಂದ ಏನನ್ನೂ ನಿರೀಕ್ಷಿಸಲಿಲ್ಲ. ಕೀಳು ಜಾತಿಯವನಾದರೂ ಸ್ವಾಭಿಮಾನ, ಆತ್ಮಗೌರವ ಆತನಲ್ಲಿತ್ತು ಎಂಬುದನ್ನು ಗಮನಿಸಬಹುದು.

ಮುಕುಂದಯ್ಯ ನಾಯಿಯನ್ನು ಕೊಳ್ಳುವಾಗ ಗುತ್ತಿಗೆ ಹೇಗೆ ಇಲ್ಲವೆನ್ನಲಿಕ್ಕೆ ಸಾಧ್ಯವಿಲ್ಲವೋ, ಹಾಗೆಯೇ ಜಮೀನುದಾರನ ಮಗನಾದ ಮುಕುಂದಯ್ಯನು ಗುತ್ತಿಯ ನಾಯಿಯನ್ನು ಪಡೆದು ಪ್ರತಿಯಾಗಿ ಕೊಟ್ಟ ಕೆಲವು ವಸ್ತುಗಳನ್ನು ಅಸ್ಪಶ್ಯ ಜೀತಗಾರನಾದ ಗುತ್ತಿ ನಿರಾಕರಿಸುವಂತೆಯೂ ಇರಲಿಲ್ಲ. ಅಂದರೆ ಈ ಘಟನೆಯ ಸುತ್ತಲೂ ಅತಿ ಸೂಕ್ಷ್ಮವೂ, ತೀವ್ರತರವೂ ಆದ ಕೆಲವು ಚಿರಂತನ ಯೋಗ್ಯ ಭಾವನೆಗಳು ತುಂಬಿಕೊಂಡಿರಲಾಗಿ ಈ ಘಟನೆ ಭಾವಭರಿತವಾದುದು ಮಾತ್ರವಲ್ಲದೆ ಕಲಾತ್ಮಕವಾದದ್ದೂ, ಅತ್ಯಂತ ಸಂಕೀರ್ಣವೂ ಆದುದೆನಿಸುತ್ತದೆ. ಅದೇ ರೀತಿಯಲ್ಲಿ

ನಾಯಿಯನ್ನು ಮುಕುಂದಯ್ಯನಿಗೆ ಕೊಟ್ಟು ಹೋದ ಗುತ್ತಿ ಕೇವಲ ಅನತಿ ಕಾಲದಲ್ಲೇ ಹಿಂದಿರುಗಿ ಬಂದು ಮುಕುಂದಯ್ಯ ಕೊಟ್ಟಿದ್ದ ವಸ್ತುಗಳನ್ನೆಲ್ಲ ಹಿಂದಿರುಗಿಸುತ್ತಾನೆ.

ಈ ಒಂದು ಸಾಮಾನ್ಯ ಘಟನೆಯಿಂದ, ಲೇಖಕರು ಗುತ್ತಿಯಂಥ ಒಬ್ಬ ಸಾಮಾನ್ಯ ಅಸ್ಪಶ್ಯನಲ್ಲು ನಾಗರಿಕ ಸೌಜನ್ಯದಂಥ ನಡವಳಿಕೆ, ಅತ್ಯಂತ ಸೂಕ್ಷ್ಮ ಸಂವೇದನೆ, ಮಾನವ ಪ್ರೇಮ, ಸಂಕೀರ್ಣ ಸಮಸ್ಯೆಯನ್ನು ಅನತಿ ಕಾಲದಲ್ಲಿ ಬಿಡಿಸಿಕೊಂಡ ಸೂಕ್ಷ್ಮಬುದ್ಧಿ ಮುಂತಾದ ಹಲವು ಹತ್ತು ಬಗೆಯ ಬೌದ್ಧಿಕ ಮತ್ತು ಭಾವನಾಮಯ ಪ್ರಪಂಚವನ್ನು ಅವರಲ್ಲಿ ಸೃಷ್ಟಿಸಿದ್ದಾರೆ.

ಅಂದರೆ ಇಂಥ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನು ಒಳಗೊಂಡಿರುವುದರಿಂದಲೇ ಕಾದಂಬರಿ ಅತ್ಯಂತ ಸಂಕೀರ್ಣವಾದ ಬದುಕಿನ ಸ್ವರೂಪವನ್ನು ಪಡೆದುಕೊಂಡಿರುವಂತೆಯೇ ಗುತ್ತಿಯಂಥ ಒಬ್ಬ ಅಸ್ಪಶ್ಯ ಕೂಡ ಕೇವಲ ಜೀತಗಾರನಾದರೂ ಜೀವಂತ ಸಂವೇದನೆಯುಳ್ಳ ಒಬ್ಬ ನಾಗರಿಕ ಮಡಿವಂತನೂ ಅನಿಸಲಿಕ್ಕೆ ಸಾಧ್ಯವಾಗಿರುವಂತಿದೆ. ಇವೆಲ್ಲಕ್ಕಿಂತ ಮಿಗಿಲಾಗಿ ಗುತ್ತಿ ನಾಯಿಯನ್ನು ಕೊಡುವ ಹಾಗೂ ಅದಕ್ಕೆ ಪ್ರತಿಯಾಗಿ ಕೆಲವು ವಸ್ತುಗಳನ್ನು ಪಡೆಯುವ, ಮತ್ತೆ ಮುಕುಂದಯ್ಯನಿಗೆ ಹಿಂದಿಗುರಿಸುವ ಇಷ್ಟೆಲ್ಲ ಕ್ರಿಯೆಗಳೂ ರಂಗಪ್ಪಗೌಡ, ಐಗಳು ಮುಂತಾದ ಹಲವು ವ್ಯಕ್ತಿಗಳ ಕಣ್ಣೆದುರಿಗೇ ನಡೆಯುವ ಈ ಘಟನಾವಳಿಗಳ ನಡುವೆ ಲೇಖಕರು ಗುತ್ತಿಯನ್ನು ಒಬ್ಬ ಸೂಕ್ಷ್ಮಮತಿಯನ್ನಾಗಿ ಚಿತ್ರಿಸಿದ್ದಾರೆ.

ಗುತ್ತಿಯ ಪ್ರಾಮಾಣಿಕ ನಿಷ್ಠೆಗೆ ಗೌರವ ಕೊಡುವವರೆಂದರೆ ತಿಮ್ಮಿ ಮತ್ತು ಹುಲಿಯ. ಆದ್ದರಿಂದ ಹುಲಿಯನ ನಿಷ್ಠೆ ಮುಕುಂದಯ್ಯನನ್ನು ತೊರೆದು ಗುತ್ತಿಗೆ ಬಂದಿದೆ. ಇಲ್ಲಿ ಮುಕುಂದಯ್ಯ ಸುಸಂಸ್ಕೃತ ಸ್ತರದವನಾದರೂ ಹುಲಿಯನಿಗೆ ಅದರ ಪ್ರಜ್ಞೆ ಇಲ್ಲದಿರುವುದರಿಂದ ಸಮಾಜವು ಅನಾಗರಿಕ ಎಂದು ಪರಿಗಣಿಸುವ ಗುತ್ತಿಯನ್ನು ಆಶ್ರಯಿಸುತ್ತದೆ. ಸಾಂಸ್ಕೃತಿಕ ಚಲನೆಗಳು ಯಾವಾಗಲೂ ತಳದಿಂದ ಸೃಷ್ಟಿಯಾಗುತ್ತವೆ ಮತ್ತು ಮೇಲ್ಮುಖವಾಗಿ ಹರಿಯುತ್ತವೆ ಎಂಬುದಕ್ಕೆ ಇಂಥ ಸಂದರ್ಭಗಳು ನಿದರ್ಶನವಾಗುತ್ತವೆ.

ಮಲೆನಾಡಿನ ಸಾಮಾಜಿಕ ಪರಿಸರದಲ್ಲಿ ಅಸ್ಪಶ್ಯತೆ ಎಂಥ ಪರಮಾವಧಿಯನ್ನು ಮುಟ್ಟಿತ್ತು ಎಂಬುದನ್ನು ಕುವೆಂಪು ಒಂದೆಡೆ ಹೇಳುತ್ತಾ "ಸಾಬಿಯಿಂದ ಅತ್ಯಾಚಾರಕ್ಕೊಳಗಾದ ಅಂತಕ್ಕ ಸೆಟ್ಟಿಯ ಮಗಳು ಕಾವೇರಿಗೆ ತನ್ನ ಮೈಯನ್ನು ಕೆಡಿಸಿದ ಪಾಪಿಗಳಲ್ಲಿ ಅಶ್ಪಶ್ಯನಾದ ಚೀಂಕನೂ ಸೇರಿದ್ದನೆಂಬುದು ಗೊತ್ತಾಗದಿದ್ದುದು ಭಗವತ್ ಕೃಪೆಯೇ ಆಗಿತ್ತು"[೧೭]ಎನ್ನುತ್ತಾರೆ. ಬಹುಶಃ ಆ ವಿಚಾರವೇನಾದರೂ ತಿಳಿದಿದ್ದ ಪಕ್ಷದಲ್ಲಿ ಆ ಕ್ಷಣದಲ್ಲೇ ಆಕೆಯ ಪ್ರಾಣ ಹಾರಿಹೋಗುತ್ತಿತ್ತೋ ಏನೋ! ಅವಳ ಪ್ರಕಾರ ಅತ್ಯಾಚಾರ ಮಾತ್ರ ಆಗಿತ್ತು. ಅವಳು ಊಹಿಸದೆ ಇದ್ದ ಭಯಂಕರ ಅತ್ಯಾಚಾರವಲ್ಲ!.

ಜಾತಿಯ ವ್ಯವಸ್ಥೆಯ ಶ್ರೇಣೀಕರಣದಲ್ಲಿ ಸಾಮಾಜಿಕ ಸಂಬಂಧಗಳ ನಡುವೆ ನಿರ್ಬಂಧ ಹೇರಲಾಗಿತ್ತು. ಕೆಳಜಾತಿ ಮತ್ತು ಮೇಲ್ಜಾತಿಯ ನಡುವೆ ನಿರ್ದಿಷ್ಟ ಅಂತರವನ್ನು ಕಾಯ್ದುಕೊಳ್ಳಬೇಕಾಗಿತ್ತು. ಇದು ತಪ್ಪು ಎಂದು ಪ್ರತಿಭಟಿಸುವ ಮನೋಭಾವವೂ ಇಲ್ಲದ ಮುಗ್ಧತೆ ಕೆಳಜಾತಿಯವರಲ್ಲಿ ಮನೆ ಮಾಡಿತ್ತು. ಬಹುಶಃ ಇದೇ ಕಾರಣಕ್ಕೆ ತಾವು ಎಷ್ಟೇ ಶೋಷಣೆಗೆ ಒಳಗಾದರೂ ಇನ್ನೊಂದು ಜಾತಿಗಾಗಲಿ, ಧರ್ಮಕ್ಕಾಗಲಿ ಸೇರುವ ಪ್ರಯತ್ನ ಮಾಡದಿರುವುದನ್ನು ಕಾದಂಬರಿ ಧ್ವನಿಸುತ್ತದೆ.

ಹುಲಿಕಲ್ಲು ನೆತ್ತಿಯಲ್ಲಿ ನಾಗತ್ತೆ, ನಾಗಕ್ಕ ಮತ್ತು ಗುತ್ತಿಯರು ಪಯಣಿಸುವಾಗ ಗುತ್ತಿ ಅವರಿಗಿಂತ ದೂರದಲ್ಲಿ ತನ್ನ ನೆರಳು ಸೋಕಿದರೂ ಮೈಲಿಗೆ ಎಂಬಂತೆ ನಡೆಯುತ್ತಿದ್ದ. ಈ ಸಂದರ್ಭವನ್ನು ಕುರಿತು ಕಾದಂಬರಿಕಾರರು ''ಹೊಲೆಯನಾದವನಿಗೆ ಹಿಂದೆ ಸ್ವಲ್ಪ ದೂರದಲ್ಲಿಯೇ ಇದ್ದುಕೊಂಡು ಅನುಸರಿಸುವುದು ಮೇಲುಜಾತಿಯವರಿಗೆ ಅವನು ತೋರಿಸಬೇಕಾದ ಮರ್ಯಾದೆಯಲ್ಲವೆ?''೧೮ ಎನ್ನುವ ಮೂಲಕ ವ್ಯವಸ್ಥೆಯ ಕಟ್ಟುಪಾಡುಗಳ ವಿರುದ್ಧ ಕಿಡಿಕಾರುತ್ತಾರೆ.

ಇದೇ ಸನ್ನಿವೇಶಕ್ಕೆ ಸಂಬಂಧಿಸಿದಂತೆ ನಾಗಕ್ಕ ನಾಗತ್ತೆಯರು ಆಯಾಸ ಪರಿಹಾರಕ್ಕಾಗಿ ಒಂದೆಡೆ ಕೂರುತ್ತಾರೆ. ಅವರಿಗೆ ಸ್ವಲ್ಪ ದೂರದಲ್ಲಿ ಗುತ್ತಿ ತನ್ನ ಕಂಬಳಿ ಕೊಪ್ಪೆಯನ್ನು ಮಡಿಸಿ ಹಾಕಿಕೊಂಡು, ಬಗನಿ ದೊಣ್ಣೆಯನ್ನು ಜಣಕ್ಕನೆ ಅರೆಕಲ್ಲಿನ ಮೇಲೆ ಹಾಕಿ, ತನ್ನ ಕಾಲಿಗೆ ಹತ್ತಿದ್ದ ಇಂಬಳಗಳನ್ನು ಕೈಯಿಂದೆಳೆದು ಬಿಸಾಡುತ್ತಾ ಕುಳಿತನು. ಅದನ್ನು ಗಮನಿಸಿದ ನಾಗಕ್ಕ ನಾಗತ್ತೆಯ ಆಜ್ಞೆಯಂತೆ ಗುತ್ತಿಯ ಕಡೆಗೆ ಹೊಗೆಸೊಪ್ಪಿನ ತುಂಡನ್ನು ಎಸೆದಳು.

ಈ ಸನ್ನಿವೇಶ ಜಾತಿ ವ್ಯವಸ್ಥೆಯಲ್ಲಿ ಸಾಮಾಜಿಕವಾಗಿ ಹಿಂದಿರುವವರು ಮೇಲಿನವರಿಗಿಂತ ಎಲ್ಲ ಸಂದರ್ಭಗಳಲ್ಲೂ ಹಿಂದಿರಬೇಕಾಗುತ್ತಿತ್ತು ಎಂಬುದನ್ನು ಕಾದಂಬರಿಕಾರರು ಧ್ವನಿಸುತ್ತಾರೆ. ಹಾಗೂ ಅಸ್ಪೃಶ್ಯತಾ ಆಚರಣೆ ಸಾಮಾಜಿಕ ಸಂಪರ್ಕದ ಮೇಲೆ ವಿಧಿಸಿದ್ದ ನಿರ್ಬಂಧವನ್ನು ಚಿತ್ರಿಸುತ್ತಾರೆ.

''ಈ ಮೇಲು-ಕೀಳು ಸ್ಪೃಶ್ಯ-ಅಸ್ಪೃಶ್ಯ ಎಂಬ ಭಾವ ಕೇವಲ ಬ್ರಾಹ್ಮಣ-ಶೂದ್ರರ ನಡುವೆಯಷ್ಟೇ ಅಲ್ಲದೆ ಶೂದ್ರ ಮತ್ತು ಶೂದ್ರಾತಿಶೂದ್ರರ ನಡುವೆಯೂ ಉದ್ದಕ್ಕೂ ಬೆಳೆದು ಬಂದು ಒಂದು ದೊಡ್ಡ ಕಂದರವನ್ನು ಉಂಟು ಮಾಡಿದೆ. ಆ ಜನ ಯಾವುದನ್ನೂ ಪ್ರಶ್ನಿಸುವುದಿಲ್ಲ ಎಲ್ಲವನ್ನೂ ಮೂಕವಾಗಿ ಒಪ್ಪುತ್ತಾರೆ. ಇದು ಮಾನವ ಸೃಷ್ಟಿಯಲ್ಲ. ಈ ಕಟ್ಟು ಕಟ್ಟಲೆಗಳಲ್ಲಿ ಕಾಣದ ಆತನಿಂದ (ಭಗವಂತ) ನಿರ್ಮಿತವಾದವುಗಳು ಎಂಬುದು ಅವರ ಭಾವನೆ''.೧೯ ಅದರಿಂದಾಗಿ ನೂರಾರು ವರ್ಷಗಳು ಕಳೆದರೂ ಆ ಮನೋಭಾವವನ್ನು ಹೋಗಲಾಡಿಸಿ ತಿದ್ದಿ ತೀಡಲು ಸಾಧ್ಯವಾಗಲಿಲ್ಲ.

ಹೊಲೆಯರ ಗುತ್ತಿಯ ನೋವಿನಲ್ಲಿ ನಾವು ಕಿಂಚಿತ್ ವಿಚಾರದ ಸುಳುಹನ್ನು ಕಾಣಬಹುದಾದರೂ ಆತ ತಾನು ಕೀಳು ಜಾತಿಯಲ್ಲಿ ಹುಟ್ಟಬಾರದಿತ್ತು ಎಂದುಕೊಳ್ಳುತ್ತಾನೆಯೇ ವಿನಃ ಹೆಚ್ಚು ಕಡಿಮೆ ಎನ್ನುವ ಭಾವ ತೊಡೆದುಹೋಗುವುದಿಲ್ಲ. ನಿರಪರಾಧಿಯಾಗಿ ಬಂದಾಗ ''ನಾನು ಹೊಲೆಯರವನಲ್ಲದೆ ಬ್ಯಾರೆ ಜಾತಿಗೆ ಸೇರಿದವನಾಗಿದ್ದರೆ ಹಿಂಗಾಗ್ತಿತ್ತೆ''೨೦ ಎಂದು ಕೊಳ್ಳುತ್ತಾನೆ. ಹೊಲೆಯರಲ್ಲದವರಿಗೆ ಕಷ್ಟಗಳು ಬರುವುದಿಲ್ಲ. ಒಂದು ವೇಳೆ ಬಂದರೂ ಅವುಗಳನ್ನು ಹೇಗಾದರೂ ನಿವಾರಿಸಿಕೊಳ್ಳುತ್ತಾರೆ, ಎಂಬುದು ಗುತ್ತಿಯ ಆಲೋಚನೆ. ಈ ಆಲೋಚನೆಯಲ್ಲಿ ಅವನ ಅಸಹಾಯಕ ವೇದನೆ ಸ್ಪಷ್ಟವಾಗಿ ಗೋಚರವಾಗುತ್ತದೆ.

ಜಾತಿ ವ್ಯವಸ್ಥೆ ಲೈಂಗಿಕತೆಯನ್ನು ಪ್ರಭಾವಿಸುವ ರೀತಿಗೆ ಸಂಬಂಧಿಸಿದ್ದು, ಇದರ ಎರಡು ನಿದರ್ಶನಗಳು ಕಾದಂಬರಿಯಲ್ಲಿವೆ. ಮೇಗರವಳ್ಳಿಯಲ್ಲಿ ಗುತ್ತಿ ವಾಡಿಕೆಯಂತೆ ಅಂತಕ್ಕ ಸೆಟ್ಟಿಯ ಮನೆಗೆ ಹೋದಾಗ ಕಾವೇರಿಯ ಭೆಟ್ಟಿಯಾಗುತ್ತದೆ. ದೃಢಕಾಯನಾದ ಗುತ್ತಿಯನ್ನು ಕಾವೇರಿ ಮೆಚ್ಚುಗೆಯಿಂದಲೇ ನೋಡುತ್ತಾಳೆ. ಈ ಸಂದರ್ಭದಲ್ಲಿ ಬರುವ ನಿರೂಪಕನ ವ್ಯಾಖ್ಯಾನ ಮಾರ್ಮಿಕವಾದದ್ದು. "ಅಸ್ಪೃಶ್ಯನಾದ ಹೊಲೆಯ ಮನುಷ್ಯ ಜಾತಿಯವನಾಗಿದ್ದರೂ ತನ್ನ ಜಾತಿಯೂ ಅಲ್ಲದ, ತನಗೆ ಸರಿಸಮಾನ ಜಾತಿಯೂ ಅಲ್ಲದ ಅತ್ಯಂತ ಕೊನೆಯ ಕೀಳುಜಾತಿಯವನಾಗದ್ದುದರಿಂದ ಪರೆಹರೆಯ ಕೊಂಬಿನ ಚೆಲುವಿನ ಹೋರಿ ಮಿಗವನ್ನು ಮೆಚ್ಚಿನೋಡುವಂತೆ ನೋಡಿದಳು. ತನಗೂ ಅವನಿಗೂ ಮಾನವೀಯವಾದ ಗಂಡು ಹೆಣ್ಣಿನ ಸಂಬಂಧ ಭಾವನೆ ಸುಳಿವೂ ಸರ್ವದಾ ಅಸಂಭವ, ನಿಸರ್ಗ ವಿರುದ್ಧ, ಅಸ್ವಾಭಾವಿಕ, ಅಸಾಧ್ಯ ಎಂಬ ಪ್ರಚ್ಛನ್ನ ಅವಳ ನೋಟಕ್ಕೆ ನಿಸ್ಸಂಕೋಚತೆಯೀಯುವ ಧರ್ಮ ರಕ್ಷೆಯಾಗಿತ್ತು"೨೧.

ಕೆಳಜಾತಿಯವನೊಬ್ಬ ಮೇಲುಜಾತಿಯವನೊಡನೆ ಇಟ್ಟುಕೊಳ್ಳುವ ಸಂಬಂಧದಲ್ಲಿಯೂ ಜಾತಿಪ್ರಜ್ಞೆ ಹೇಗೆ ಕೆಲಸ ಮಾಡುತ್ತದೆಯೆನ್ನುವುದಕ್ಕೆ ಐತ ಪೀಂಚಲುವಿನ ವಿಷಯದಲ್ಲಿ ಮುಕುಂದಯ್ಯನನ್ನು ನಂಬುವುದು ಒಂದು ಒಳ್ಳೆಯ ನಿದರ್ಶನ. ಮುಕುಂದಯ್ಯನನ್ನು ಚೆನ್ನಾಗಿ ಅರಿತಿದ್ದ ಅವನಿಗೆ ಅಚಲವಾದ ನಂಬುಗೆಯಿತ್ತು. ಅದಕ್ಕೆ ಬೆಂಬಲವಾಗಿ ಕೀಳು ಜಾತಿಯವರಾಗಿದ್ದ ತಾವು ಪ್ರತ್ಯೇಕ ಪ್ರಾಣಿ ವರ್ಗಕ್ಕೆ ಸೇರಿದವರೋ ಎಂಬಂತೆ, ಮೇಲುಜಾತಿಯ ಮನುಷ್ಯ ವರ್ಗಕ್ಕೆ ಸೇರಿದ ಮುಕುಂದಯ್ಯನ ಮೋಹಕ್ಕೆ ಪಕ್ಕಾಗುವುದೂ ಸಾಧ್ಯವಿರಲಿಲ್ಲ ಎಂಬುದು ಅವನ ರಕ್ತಗತ ಬುದ್ಧಿಯಾಗಿತ್ತು. ಜಿಂಕೆ ನಾಯಿಯ ಮೇಲೆ ಮೋಹಗೊಳ್ಳುವುದು ಹೇಗೆ ಅಸಂಭವವೋ ಹಾಗೆ ಜಾತಿ ತಾರತಮ್ಯಕ್ಕೆ ಇದಕ್ಕಿಂತ ಒಳ್ಳೆಯ ನಿದರ್ಶನ ಸುಲಭವಾಗಿ ಸಿಗಲಾರವು.

ಹೀಗೆ ಜೀವನ ಕ್ರಮಗಳಲ್ಲಿನ ಭಿನ್ನತೆ, ವೈವಿಧ್ಯತೆ, ಸಾಮಾಜಿಕ, ಸಾಂಸ್ಕೃತಿಕ ಶ್ರೇಣೀಕರಣಗಳ ವಿಕಾರರೂಪಗಳನ್ನು ಪಡೆದುಕೊಂಡು ಬಿಡುವುದು ಜಾತಿ ಪದ್ಧತಿಯ ದೊಡ್ಡ ದುರಂತ. ಶ್ರೇಣೀಕರಣವನ್ನು ಅನಿವಾರ್ಯವಾಗಿ ಸಹಜವೆಂಬಂತೆ ಒಪ್ಪಿಕೊಂಡು ತಮ್ಮ ತಮ್ಮ ಆವರಣದ ಸ್ವಾಯತ್ತತೆಗಳನ್ನು ರಕ್ಷಿಸಿಕೊಳ್ಳಲು ಪ್ರತಿಯೊಂದು ಜಾತಿಯೂ ಪ್ರಯತ್ನಿಸುತ್ತದೆ. ಜಾತಿಯ ಆವರಣವನ್ನು ದಾಟಲು ಪ್ರಯತ್ನಿಸುವಾಗಲೆಲ್ಲ ತನಗಿಂತ ಉತ್ತಮ ಜಾತಿಯನ್ನು ಮಾದರಿಯಾಗಿಟ್ಟುಕೊಳ್ಳುವಂಥದ್ದು, ಇಲ್ಲದಿದ್ದ ಪಕ್ಷದಲ್ಲಿ ತಮ್ಮ ತಮ್ಮ ಜಾತಿಯ ಲಕ್ಷ್ಮಣ ರೇಖೆಗಳ ಒಂದು ಬಗೆಯ ಸುರಕ್ಷತೆಯ ಭಾವವನ್ನು ಕೊಟ್ಟುಬಿಡಬಹುದು.

ಒಟ್ಟಾರೆ ಭಾರತದಲ್ಲಿ ಎಷ್ಟು ಸಾವಿರ ಜಾತಿಗಳಿವೆಯೋ ಪ್ರತಿಜಾತಿಯ ಸಂದರ್ಭದಲ್ಲೂ ಅದಕ್ಕೆ ಮೇಲಿನ ಜಾತಿ ಕೆಳಗಿನ ಜಾತಿ ಇದೇ ಇರುತ್ತವೆ. ಹಾಗಾಗಿ ಶೋಷಣೆಯ ಅರಿವು ಮೂಡಿದಾಗಲೂ ನಮ್ಮನ್ನು ಬೇರೆಯವರು ಶೋಷಿಸುತ್ತಿದ್ದಾರೆ ಎಂಬ ಪ್ರಜ್ಞೆ ಮೂಡುವಷ್ಟು ಸುಲಭವಾಗಿ ನಾವೂ ಇತರ ಅನೇಕರನ್ನು ಶೋಷಿಸುತ್ತಿದ್ದೇವೆ ಎಂಬ ತಿಳುವಳಿಕೆ ಮೂಡುವುದಿಲ್ಲ.

**ಜೀತಪದ್ಧತಿ :**

ಶತಮಾನಗಳಿಂದ ಜಾತಿ ವ್ಯವಸ್ಥೆ ಒಂದು ಬಹುದೊಡ್ಡ ಸಾಮಾಜಿಕ ಪಿಡುಗಾಗಿ ಸಮಾಜದ ಕೆಳವರ್ಗದ ಜನತೆಯನ್ನು ಶೋಷಣೆಗೆ ಗುರಿ ಮಾಡಿದಂತೆ ಜೀತಪದ್ಧತಿಯೂ ಸಹ ಈ ವರ್ಗವನ್ನು ಅಮಾನುಷವಾಗಿ ಶೋಷಿಸುತ್ತಾ ಬಂದಿದೆ. ಕೆಳಜಾತಿಗೆ ಸೇರಿದ ಜನತೆ ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಸವಲತ್ತುಗಳಿಂದ ವಂಚಿತರಾಗಿ ತುಳಿತಕ್ಕೆ ಒಳಗಾದರು. ಜಾತಿ ವ್ಯವಸ್ಥೆಯಲ್ಲಿ ಆರ್ಥಿಕವಾಗಿ ಹಿಂದುಳಿದಿರುವ, ಕೆಳಜಾತಿಯಲ್ಲಿ ಹುಟ್ಟಿದ ಪರಿಣಾಮವಾಗಿ ಜೀತವ್ಯವಸ್ಥೆಯ ಕಪಿಮುಷ್ಠಿಗೆ ಸಿಲುಕಬೇಕಾಯ್ತು. ಜೀವನ ನಿರ್ವಹಣೆಗಾಗಿ ಮೇಲ್ವರ್ಗದವರ ಬಳಿ ವಂಶಪಾರಂಪರ್ಯವಾಗಿ ಜೀತಗಾರರಾಗಿ ದುಡಿದು ನಿರಂತರ ಶೋಷಣೆಗೆ ಈ ವರ್ಗ ಗುರಿಯಾಗುತ್ತಲೇ ಬಂದಿದೆ. ಪ್ರಸ್ತುತ ಕಾನೂನುಗಳು ರಚನೆಯಾಗಿದ್ದರೂ ಇದನ್ನು ಸಂಪೂರ್ಣವಾಗಿ ನಿರ್ಮೂಲನಗೊಳಿಸಲಾಗಿಲ್ಲ.

ಜೀತಪದ್ಧತಿಯು ಸಮಾಜದಲ್ಲಿ ಅಸ್ಥಿತ್ವದಲ್ಲಿರುವ ಒಂದು ಬಗೆಯ ಅಮಾನವೀಯ ಆಚರಣೆ ಆರ್ಥಿಕ ಅಂಶದ ಹಿನ್ನೆಲೆಯಲ್ಲಿ ಕೆಳವರ್ಗ ಹಾಗೂ ಕೆಳಜಾತಿಯ ಜನರನ್ನು ಶೋಷಿಸುವ ಬಗೆ, ಈ ಜೀತಪದ್ಧತಿಯಲ್ಲಿ ವ್ಯಕ್ತಿ ಸಾಲದಲ್ಲಿಯೇ ಹುಟ್ಟಿ ಸಾಲದಲ್ಲಿಯೇ ಬೆಳೆದು ಸಾಲದಲ್ಲಿಯೇ ಸಾಯಬೇಕಾದ ಧಾರುಣ ಸ್ಥಿತಿ ಇದೆ. ಈ ಸಾಲದ ಹೊರೆ ಒಂದು ತಲೆಮಾರಿಗೆ ಕೊನೆಗೊಳ್ಳುವಂಥದ್ದಲ್ಲ. ತಲೆಮಾರಿನಿಂದ ತಲೆಮಾರಿಗೆ ಸಾಗಿ ಇಡೀ ಕುಟುಂಬವನ್ನು ಶೋಷಣೆಗೆ ಗುರಿ ಪಡಿಸುವ ಅಮಾನುಷ ಪದ್ಧತಿ ಶ್ರಮಕ್ಕೆ ತಕ್ಕ ಪ್ರತಿಫಲವಿಲ್ಲದೆ ಗಾಣದೆತ್ತಿನಂತೆ ನಿರಂತರ ದುಡಿಮೆಯಿಂದ ವ್ಯಕ್ತಿಗಳನ್ನು ಪ್ರಾಣಿಗಳಂತೆ ಅಮಾನುಷವಾಗಿ ನಡೆಸಿಕೊಳ್ಳುವ ಒಂದು ವ್ಯವಸ್ಥೆಯಾಗಿದೆ.

ಇಂತಹ ಸಾಮಾಜಿಕ ಕ್ರೂರ ಪದ್ಧತಿಯನ್ನು ಮಾನವತಾವಾದಿಯಾಗಿ ಬೆಳೆದು ಬಂದ ಕುವೆಂಪು ಶೋಷಿತ ವರ್ಗದ ಎಲ್ಲ ಕುತಂತ್ರಗಳು ಗುಳ್ಳೆನರಿ ಬುದ್ಧಿಗಳನ್ನು ತಮ್ಮ ಕಾದಂಬರಿಗಳಲ್ಲಿ ಗಮನಾರ್ಹವಾಗಿ ಬಯಲಿಗೆಳೆದಿದ್ದಾರೆ. ಸಾವಿರಾರು ವರ್ಷಗಳಿಂದ ದಬ್ಬಾಳಿಕೆಗೆ ದೌರ್ಜನ್ಯಕ್ಕೆ ಗುರಿಯಾಗಿದ್ದ ದಲಿತರ ನೋವು, ಅಜ್ಞಾನ, ಮುಗ್ಧತೆಗಳನ್ನು ತಮ್ಮ ಬರವಣಿಗೆಗಳಲ್ಲಿ ಪರಿಣಾಮಕಾರಿಯಾಗಿ ಖಂಡರಿಸಿದ್ದಾರೆ.

ಮಲೆನಾಡು ಸಂಸ್ಕೃತಿಯ ಹಿನ್ನೆಲೆಯಲ್ಲಿಯೇ ಅಲ್ಲಿನ ದುಡಿವ ವರ್ಗವನ್ನು, ಅವರ ಜೀವನ ವಿಧಾನವನ್ನು ಅವರು ಮತ್ತು ಅವರ ಒಡೆಯರ ನಡುವಿನ ಸಂಬಂಧವನ್ನು ಅರ್ಥೈಸಬೇಕಾಗುತ್ತದೆ. ಇಲ್ಲಿ ಸಾಮಾಜಿಕವಾಗಿ ಮಧ್ಯಮ ವರ್ಗದವರಾದ ಗೌಡರು ಇಡೀ ಬದುಕಿನ ಜವಾಬ್ದಾರಿಯನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿದ್ದಾರೆ. ಸ್ವಾರಸ್ಯವೇನೆಂದರೆ ಗೌಡರನ್ನು ಬಿಟ್ಟರೆ ದುಡಿವವರಿಗೆ ಬದುಕಿಲ್ಲ. ಆಳುಗಳನ್ನು ಬಿಟ್ಟರೆ ಜಮೀನ್ದಾರರಾದ ಗೌಡರಿಗೆ ಗತಿಯಲ್ಲ. ಈ ರೀತಿ ಪರಸ್ಪರ ಅವಲಂಬಿತ ಬದುಕೇ ಅಲ್ಲಿನ ಎಲ್ಲ ಜನತೆಯದಾಗಿದೆ.

ಆದರೆ ಮಲೆನಾಡಿಗೆ ಜಮೀನ್ದಾರರಾದ ಗೌಡರು ದುಡಿಯುವವರನ್ನು (ಜೀತದಾಳು) ಸ್ವಲ್ಪ ಕಠಿಣವಾಗಿಯೇ ನಡೆಸಿಕೊಳ್ಳುವುದು ಕಂಡು ಬರುತ್ತದೆ. ಪರಿಸ್ಥಿತಿ ಹೀಗಿದ್ದಾಗ ಅಲ್ಲಿನ ''ದುಡಿವ ವರ್ಗ ಮೇಲ್ವರ್ಗದ ಕಪಿಮುಷ್ಠಿಗೆ ಸಿಲುಕದೆ ಪಾರಾಗುವುದೇ ಕಾದಂಬರಿಯುದ್ದಕ್ಕೂ ಕಂಡು ಬರುತ್ತದೆ''[೨೨]

ಗೌಡ ಅಥವಾ ಹೆಗ್ಗಡೆ ದುಡಿಯುವ ಸಂದರ್ಭದಲ್ಲಿ ಎದುರಿಗಿದ್ದಾಗ ಅವರಿಗೆ ಭಯ-ಭಕ್ತಿಗಳಿಂದ ಗೌರವ ತೋರಿ ದುಡಿದರೆ, ಅವರಿಲ್ಲದ ಸಂದರ್ಭದಲ್ಲಿ ಪುನಃ ಸಹಜ ಬದುಕಿಗೆ ಹಿಂದಿರುಗಿ ತಮ್ಮ ಸ್ವಂತ ಅಭಿಲಾಷೆಗಳಿಗನುಗುಣವಾಗಿ ನಡೆದುಕೊಳ್ಳುತ್ತಾರೆ. ಕಾದಂಬರಿಯಲ್ಲಿ ಬರುವ ಭರಮೈ ಹೆಗ್ಗಡೆ, ಸುಬ್ಬಣ್ಣ ಹೆಗ್ಗಡೆ, ಕಲ್ಲೇಗೌಡ ಮೊದಲಾದವರು ಯಜಮಾನ ಸಂಸ್ಕೃತಿಯ ಪ್ರತೀಕಗಳಾದರೆ ಗುತ್ತಿ, ಬಚ್ಚ, ಐತ, ಸಣ್ಣಕುಳ್ಳ, ದೊಡ್ಡಬೀರ, ಸಣ್ಣಬೀರ ಮೊದಲಾದವರು ದುಡಿವವರ್ಗದ ಪ್ರತಿನಿಧಿಯಾಗಿದ್ದಾರೆ.

ಜೀತದಲ್ಲಿ ಸಿಲುಕಿದ ಕೆಳವರ್ಗದ ಜನ ತಮ್ಮ ಜೀವನ ನಿರ್ವಹಣೆಗಾಗಿ ಒಡೆಯರ ಭೂಮಿಗಳಲ್ಲಿ ದುಡಿಯುತ್ತ ಅದರಿಂದ ಬರುವ ಪಡಿಯಿಂದ ಬದುಕುವ ಚಿತ್ರಣ ಈ ಕಾದಂಬರಿಯಲ್ಲಿದೆ. ಹೊಲೆಯರ ನಾಯಿಗುತ್ತಿ ಮತ್ತು ಅವನ ತಂದೆ-ತಾಯಿಯರು ಕೇರಿಯ ಎಲ್ಲ ಜನರು ಸಿಂಭಾವಿ ಭರಮೈ ಹೆಗ್ಗಡೆಯವರಲ್ಲಿ ಜೀತಕ್ಕಿದ್ದರು. (ಬೇಲರ, ಭೈರ, ಸಿದ್ಧ ಮೊದಲಾದವರು ಕಾನೂರಿನಲ್ಲಿ ಜೀತಕ್ಕಿದ್ದರು) ಒಡೆಯರ ಮತ್ತು ಜೀತದಾಳುಗಳ ಸಂಬಂಧ ತಲೆಮಾರುಗಳಿಂದ ಮುಂದುವರಿದುಕೊಂಡು ಬರುತ್ತಿತ್ತು. ತಂದೆಯ ನಂತರ ಮಗ, ಮಗನ ನಂತರ ಮೊಮ್ಮಗ, ಅವನ ಮಗ ಹೀಗೆ ಇಡೀ ವಂಶವೇ ಜೀತದಾಳುಗಳಾಗಿ ಒಡೆಯರಲ್ಲಿ ದುಡಿಮೆ ಮಾಡುವುದಿತ್ತು.

ಜೀತಪದ್ಧತಿಯ ಅಮಾನವೀಯತೆಯನ್ನು ಕಾದಂಬರಿಕಾರರು ಅನೇಕ ಕಡೆಗಳಲ್ಲಿ ಉಲ್ಲೇಖಿಸಿದ್ದಾರೆ. "ಕಟ್ಟಾಳಾಗಿದ್ದ ತರುಣ ಗುತ್ತಿಯನ್ನು ನೋಡಿ ತನ್ನ ಮಗಳು ತಿಮ್ಮಿಯನ್ನು ಏನೇ ಆಗಲಿ ಅವನಿಗೆ ಕೊಟ್ಟು ಆತನನ್ನು ತನ್ನ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದು ಸೇಸಿ ನಿರ್ಧರಿಸುತ್ತಾಳೆ."[೨೩] ಆದರೆ ಜೀತದಾಳುಗಳಿಗೆ ಆ ಹಕ್ಕು ಎಲ್ಲಿಂದ ಬರಬೇಕು? ಒಡೆಯರ ಆಸ್ತಿಯಾಗಿದ್ದ ಅವರನ್ನು ಯಾರಿಗೆ ಕೊಡಬೇಕು? ಎಲ್ಲಿಗೆ ಕೊಡಬೇಕು ಎಂಬುದನ್ನು ತಂದೆ-ತಾಯಿಗಳು ನಿರ್ಧರಿಸಲು ಸಾಧ್ಯವೇ? ತಮ್ಮ ಜಾನುವಾರುಗಳನ್ನು ಬಿಕರಿ ಮಾಡುವ ಹಕ್ಕು ಎಂತೋ ಅಂತೆ ಬೇಲರು, ಹೊಲೆಯರು, ಮಾದಿಗರು ಮೊದಲಾದವರು ತಮ್ಮ ಹೆಣ್ಣ-ಗಂಡುಗಳನ್ನು ಇಡುವ, ಕೊಡುವ, ಬಿಡುವ ಹಕ್ಕು ಅವರದ್ದೇ ಆಗಿತ್ತು. ಇವರು ಸ್ವಂತ ಅಸ್ತಿತ್ವವಿಲ್ಲದೆ ಪ್ರಾಣಿಗಳಂತೆ ಬದುಕುವ ಸ್ಥಿತಿಯಿತ್ತು.

ವಸ್ತುತಃ ಹಾಗಿದ್ದರೂ ಸೇಸಿ ಎಷ್ಟಾದರೂ ಮಾನವ ವರ್ಗಕ್ಕೆ ಸೇರಿದವಳಲ್ಲವೇ? ಅವಳೇನು ದನ ಅಲ್ಲವಲ್ಲ! ಮಾನವ ವರ್ಗಕ್ಕೆ ಸಹಜವಾದ ಸ್ವಾತಂತ್ರ್ಯ, ಇಚ್ಛೆ, ಆಸೆ, ಅಪೇಕ್ಷೆ ಪ್ರಯತ್ನಶೀಲತೆ ಇವುಗಳಿಂದ ಅವಳು ತಪ್ಪಿಸಿಕೊಳ್ಳಲು ಸಾಧ್ಯವೇ? ಅದರಿಂದ ಎಂತಹ ಹಾನಿಯೇ ಒದಗಲಿ ಸರ್ವನಾಶವೇ ಬೇಕಾದರೂ ಆಗಲಿ ಮಾನವತ್ವವನ್ನು ತಲುಪಿದ ಚೇತನ ಕಲ್ಲು ಮಣ್ಣುಗಳಂತೆ ತಟಸ್ಥವಾಗಿ ಬಿದ್ದಿರಲು ಸಾಧ್ಯವಿಲ್ಲ "ಅಸ್ಪೃಶ್ಯ ಗುಲಾಮರನ್ನು ಚರಾಸ್ತಿಯಂತೆ ಮಾರಾಟ ಮಾಡುವ ಶೂದ್ರ ಭೂಮಾಲೀಕ ಪದ್ಧತಿಯನ್ನು ಜೀವಂತವಾಗಿ ಚಿತ್ರಿಸುವ ಈ ಮಾತುಗಳಲ್ಲಿ ಲೇಖಕರ ಪ್ರಾಮಾಣಿಕತೆಯನ್ನು ಮೆಚ್ಚದಿರುವಂತಿಲ್ಲ"[೨೪].

ಇಲ್ಲಿ ಲೇಖಕರು ಇಲ್ಲದವರ ಆಗು-ಹೋಗುಗಳೆಲ್ಲ ಉಳ್ಳವರ ಕೈಯಲ್ಲಿ ಇವೆ ಎಂಬ ಕಟು ಸತ್ಯವನ್ನು ವಿವರಿಸುತ್ತಲೇ ಅಂಥ ಬರ್ಬರ ಶೋಷಣಾ ವ್ಯವಸ್ಥೆಯ ಪ್ರತಿಭಟನೆಯನ್ನು ಸೂಚಿಸುತ್ತಾ ಕೊನೆಗೆ ಇಲ್ಲದವರ ಮಾನವತ್ವ ಚೋದಿತ ಸಂಕಲ್ಪ, ಉಳ್ಳವರ ಕ್ರೂರ ದಬ್ಬಾಳಿಕೆಯನ್ನು ಎದುರು

ಹಾಕಿಕೊಳ್ಳಲು ಸಿದ್ಧವಾಗುವ ಸೂಚನೆಯನ್ನು ಮೇಲಿನ ವಾಕ್ಯಗಳಲ್ಲಿ ಕಾಣಬಹುದು. ಹೀಗೆ ದಮನಕ್ಕೊಳಗಾದವರು ಕ್ರಮೇಣ ದಮನ ಮಾಡಿದವರನ್ನು ಎದುರಿಸುವ ಘಟ್ಟವೊಂದರ ಸಾಧ್ಯತೆಯ ಕ್ರಾಂತದರ್ಶನವನ್ನು ಸೂಚ್ಯವಾಗಿ ನೀಡಲಾಗಿದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಲೇಖಕರ ಸರ್ವೋದಯ ದೃಷ್ಟಿಕೋನವನ್ನು ಕಾಣಬಹುದು. ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು ಎಂದ ಕುವೆಂಪು, ದುಡಿವ ವರ್ಗವನ್ನು ಕೀಳಾಗಿ ಕಾಣುವ ವ್ಯವಸ್ಥೆಯಿಂದ ದೂರಾಗಿ ಅವರನ್ನು ತಮ್ಮ ಸ್ನೇಹಿತರಂತೆ ಕಾಣುವ ಧೋರಣೆಯನ್ನು ಹೊಂದಿದ್ದಾರೆ. ದಲಿತರನ್ನು ಅತ್ಯಂತ ಕೀಳಾಗಿ ಕಾಣುವ, ಕೀಳಾಗಿ ಮಾತನಾಡಿಸುವ ಹಿರಿಯ ತಲೆಮಾರಿಗೆ ಸಂಕೋಲೆಯಿಂದ ಹೊರಬಂದು ಕೆಳವರ್ಗದ ಜನತೆಯನ್ನು ತಮ್ಮಂತೆಯೇ ಕಾಣುವ ಲೇಖಕರ ವಿಶಾಲ ದೃಷ್ಟಿಕೋನವನ್ನು ಇಲ್ಲಿ ಕಾಣಬಹುದು. ಜೊತೆಗೆ ಮೇಲ್ವರ್ಗದವರು ದಲಿತರನ್ನು ಶೋಷಿಸುವ ಧೋರಣೆಯ ವಿರುದ್ಧ ಲೇಖಕರು ಸಿಡಿದಿರುವುದನ್ನು ದಲಿತರ ದಯನೀಯ ಸ್ಥಿತಿಯನ್ನು ಕಾದಂಬರಿ ಸಮರ್ಥವಾಗಿ ಹಿಡಿದಿಟ್ಟಿದೆ.

ದಲಿತ ವರ್ಗವನ್ನು ಆಳುಗಳಂತೆ ಕಾಣುವ ಯಜಮಾನರು ಮತ್ತು ದುಡಿತದವರ ನಡುವೆ ವಿಕರ್ಷಣೆಯನ್ನು, ಸ್ನೇಹಿತರಂತೆ ಕಾಣುವ ಮುಕುಂದಯ್ಯ ಹಾಗು ಪೀಂಚಲು, ಐತ, ಗುತ್ತಿಯರ ನಡುವೆ ಆಕರ್ಷಣೆಯನ್ನು ಕಾಣಬಹುದು. ಲೇಖಕರ ಉದ್ದೇಶ ಕೂಡ ಎರಡನೇ ರೀತಿಯ ಸಂಬಂಧವೇರ್ಪಡಬೇಕೆಂಬುದೇ ಆಗಿದೆ. ಈ ನಡುವೆ ಗುತ್ತಿ, ಐತ ಮತ್ತು ಮುಕುಂದಯ್ಯ, ದೇವಯ್ಯನವರ ನಡುವಿನ ನಡವಳಿಕೆ ಸ್ವಲ್ಪ ವಿಚಾರಾರ್ಹವಾದುದು. ಇಲ್ಲಿ ಗುತ್ತಿ ಮತ್ತು ಐತ ಕೆಳವರ್ಗಕ್ಕೆ ಸೇರಿದವರು. ಮುಕುಂದಯ್ಯ ಮತ್ತು ದೇವಯ್ಯ ಯಜಮಾನಿಕೆ ಮನೆತನದಿಂದ ಬಂದಿದ್ದರೂ ಹಿಂದಿನ ಮನೆತನದ ದರ್ಪ, ಅಹಂಕಾರ ಮೊದಲಾದ ಸೂಕ್ಷ್ಮ ಗುಣಗಳು ಇವರಲ್ಲಿರಲಿಲ್ಲ. ಆದರೂ ಮುಕುಂದಯ್ಯ ಒಬ್ಬ ಸ್ನೇಹಮಯಿ. ಹಲಸರವನಾದ ಐತನೊಡನೆ, ಹೊಲೆಯನಾದ ಗುತ್ತಿಯೊಡನೆ ಸಲುಗೆಯಿಂದ ನಡೆದುಕೊಳ್ಳುವುದರಲ್ಲಿ ಅವನ ಸ್ನೇಹ ಪರತೆಯನ್ನು ಕಾಣುತ್ತೇವೆ. ಹಾಗೆಯೇ ಐತ, ಗುತ್ತಿ ಕೂಡ ಮುಕುಂದಯ್ಯನನ್ನು ಒಡೆಯನಂತೆ ಕಾಣದೆ ಒಬ್ಬ ಸ್ನೇಹಿತನಂತೆ ಕಾಣುತ್ತಾರೆ. ಒಡೆಯನಿಗಾದರೆ ಪ್ರಾಮಾಣಿಕ ದುಡಿಮೆ ನೀಡದ ಇವರು ಇಂಥ ಸರಳ ವ್ಯಕ್ತಿಯಾದ ಮುಕುಂದಯ್ಯನಿಗೆ ತಮ್ಮನ್ನೇ ಸಮರ್ಪಿಸಿಕೊಳ್ಳುತ್ತಾರೆ. ಆದ್ದರಿಂದಲೇ ಚಿನ್ನಮ್ಮನನ್ನು ಪಾರು ಮಾಡುವಲ್ಲಿ ಐತ, ಪೀಂಚಲು, ಗುತ್ತಿ ಸಹಾಯಕರಾಗಿ ನಿಲ್ಲುತ್ತಾರೆ. ಬಹುಶಃ ಇವರ ಸಹಾಯವಿಲ್ಲದಿದ್ದರೆ ಮುಕುಂದಯ್ಯನಿಗೆ ಈ ಕೆಲಸ ಸಾಧ್ಯವಾಗುತ್ತಿರಲಿಲ್ಲವೇನೋ ಎನಿಸುತ್ತದೆ.

ಈ ನಿದರ್ಶನದ ಮೂಲಕ "ಯಜಮಾನ ಮತ್ತು ದುಡಿಮೆ ವರ್ಗ ಅಂದರೆ ಅರಸ ಮತ್ತು ಆಳು ಸಂಸ್ಕೃತಿ ನಾಶವಾಗುತ್ತಾ ವರ್ಗ ತಾರತಮ್ಯವಿಲ್ಲದೆ ಸ್ನೇಹ ಸಂಬಂಧದಿಂದ ಕೂಡಿದ ಸಂಸ್ಕೃತಿ ವಿಕಾಸವಾಗುತ್ತಾ ಸಾಗುವುದನ್ನು ಕಾದಂಬರಿಯ ಚೌಕಟ್ಟಿನಲ್ಲಿ ಕಾಣಬಹುದು. ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ, ಆಳು ಮತ್ತು ಅರಸ ಈ ಎರಡು ವರ್ಗದಲ್ಲಿ ಜನತೆಯ ಗುಣಾವಗುಣಗಳನ್ನು ತುಂಬ ನಿರ್ಲಿಪ್ತವಾಗಿ ಸಹಜವಾಗಿ ಚಿತ್ರಿಸುವುದು ಲೇಖಕರ ಅನುಭವ ಗ್ರಾಹ್ಯದ ವಿಸ್ತಾರವನ್ನು ಸೂಚಿಸುತ್ತದೆ. ಅಂದರೆ ಲೇಖಕರು ಯಾವುದೇ ಪೂರ್ವಾಪರ ರಾಗಗಳಿಗೆ ಒಳಗಾಗದೆ ವೈಯಕ್ತಿಕತೆಯನ್ನು ನಿರಸನಗೊಳಿಸಿಕೊಂಡು ನಿರ್ಲಿಪ್ತ ಮನೋಭಾವದಿಂದ ಅನುಭವವನ್ನು ವ್ಯಕ್ತಪಡಿಸುತ್ತ ತಮ್ಮ ಆಶಯವನ್ನು ಸೂಚಿಸಿ ಬಿಡುತ್ತಾರೆ."[೨೫]

ಕೆಳವರ್ಗದ ಜನತೆ ವಿವಾಹ, ಜಾತ್ರೆ, ಬಲಿ ಮುಂತಾದ ಸಂದರ್ಭದಲ್ಲಿ ಒಡೆಯರಲ್ಲಿ ಸಾಲ ಪಡೆಯುತ್ತಿದ್ದರು. ಆದರಿಂದ ಮತ್ತೆ ಜೀತ ಮುಂದುವರೆಯುತ್ತಿತ್ತು. ಮೂಲದ ಅಲ್ಪ ಸಾಲ ಕಾಲ ಕಳೆದಂತೆ ಜೀತದ ಆಳುಗಳ ದುಡಿಮೆಯಿಂದ ಕಡಿಮೆಯಾಗದೆ ಹಿಗ್ಗುತ್ತಾ ಹೋಗುತ್ತಿತ್ತು. ನಾಯಿಗುತ್ತಿ ತನ್ನ ವಿವಾಹಕ್ಕಾಗಿ ತೆರ ಕೊಡಲು ಒಡೆಯರ ಹತ್ತಿರ ಹೋಗಿ ಸಾಲ ಕೇಳಿದಾಗ ಭರಮೈ ಹೆಗ್ಗಡೆ “ನಿನಗೇನು ಸೊಕ್ಕೇನೋ? ತಲೆಗಿಲೆ ಕೆಟ್ಟಿದೆಯೇ? ಅವರ ಸಾಲಾನೆಲ್ಲ ತೀರಿಸಿ, ಅವಳಿಗೆ ಅಷ್ಟೊಂದು ತೆರ ಕೊಟ್ಟು, ನಾ ನಿನಗೆ ಮದ್ವೆ ಮಾಡ್ಸಿ, ನನ್ನ ಮನೆ ಹಾಳು ಮಾಡಿಕೊಳ್ಳಲೇನೋ? ನಿನಗೆ, ನಿನ್ನ ಅಪ್ಪಗೆ, ಕೊಟ್ಟ ಸಾಲಾನೇ ಕುತ್ತರೆ ಬೆಳೆದ್ಹಾಂಗೆ ಬೆಳೆದು ನಿಂತಿದೆ! ಅದನ್ನೇ ನೀವು ತೀರಿಸಾದು ಯಾವಾಗಲೋ?...ಹೇಳ್ತೀನಿ ನೋಡು. ನಿಂಗೆ ಅವಳನ್ನ ಮದ್ವೆ ಮಾಡಿಕೊಳ್ಳಲೇಬೇಕು ಅಂತಾ ಅಷ್ಟೊಂದು ತೆವಲು ಹತ್ತಿದ್ರೆ, ಬೆಟ್ಟಳ್ಳಿ ಗೌಡ್ರಿಂದಲೇ ಸಾಲ ತಗೊಂಡು, ನನ್ನ ಸಾಲಾನೆಲ್ಲ ತೀರ್ಸಿ ಅವರ ಕೇರಿಗೆ ಹೋಗಿ, ಅವಳನ್ನ ಮದೇ ಮಾಡಿಕೊಂಡು ಸುಕಾಗಿರು’ ಎನ್ನುತ್ತಾನೆ’೨೬

ಗುತ್ತಿ ತಾನೊಲಿದವಳನ್ನು ಮದುವೆಯಾಗಬೇಕಿದ್ದರೆ, ಒಡೆಯರ ಹತ್ತಿರ ತನ್ನ ತಂದೆಯ ಕಾಲದಿಂದಲೂ ಬೆಳೆದುಬಂದಿರುವ ಸಾಲ ತೀರಿಸಬೇಕು. ಇನ್ನೊಂದು ಊರಿನ ಒಡೆಯರ ಹತ್ತಿರ ತಂದು ತೀರಿಸಿದರೂ, ಆ ಊರಿನ ಒಡೆಯರ ಜೀತಕ್ಕೆ ಸೇರಬೇಕಾಗುತ್ತದೆ. ಹೀಗಾಗಿ ಸಾಲ ತೀರುವಂತಿಲ್ಲ. ಜೀತ ಎಂದಿಗೂ ಮುಗಿಯುವಂತಿಲ್ಲ. ಬೇರೆ ಉದ್ಯೋಗ ಕೈಗೊಳ್ಳುವ ಅವಕಾಶವೇ ಇಲ್ಲದ ಇಂಥ ಅನೇಕರು ಮಲೆನಾಡಿನ ಶ್ರೀಮಂತರ ಹತ್ತಿರ, ಭೂ ಒಡೆಯರ ಹತ್ತಿರ ಜೀತಕ್ಕಿರುವುದು ಅನಿವಾರ್ಯವಾಗಿತ್ತು. ಹೀಗಾಗಿ ಜೀತದ ವೃತ್ತಿಯಲ್ಲಿ ನೂರಾರು, ಸಾವಿರಾರು ಜನ ಇದ್ದರೂ ಆಯಾ ಹಳ್ಳಿಯ ಕೇರಿಯ ಜನರೆಲ್ಲ ಆ ಊರಿನ ಜಮೀನ್ದಾರರಲ್ಲಿ ಜೀತಕ್ಕಿರುತ್ತಿದ್ದರು.

“ಜಾತಿಗೂ ಜೀತಕ್ಕೂ ನಿಕಟ ಸಂಬಂಧವಿದೆ. ಜೀತಕ್ಕೆ ಒಳಗಾದ ವ್ಯಕ್ತಿಗೆ ಬದುಕೆಂಬುದೇ ಇಲ್ಲ. ಆರ್ಥಿಕವಾಗಿ ಶೂದ್ರ ಒಡೆಯರಿಗೆ ಸಾಮಾನ್ಯ ಜನತೆಯ ಬದುಕಿನ ಜೀವಂತಿಕೆ ಮುಖ್ಯ ಎನಿಸುವುದೇ ಇಲ್ಲ. ಬದಲಾಗಿ ತಮ್ಮ ಆರ್ಥಿಕ ಬೆಳವಣಿಗೆ, ಈರ್ಷ್ಯೆ, ಜಿಡ್ಡು ಪ್ರತಿಷ್ಠೆಗಳೇ ಮುಖ್ಯವಾಗುತ್ತವೆ. ಹೀಗಾದಾಗ ಜೀತಗಾರರು ತಮ್ಮ ಬದುಕಿಗಾಗಿ ಹೋರಾಡುವುದು ಅನಿವಾರ್ಯವಾಗುತ್ತದೆ. ಇಲ್ಲಿ ಗುತ್ತಿಯಂಥವರು ಸಾಮಾಜಿಕ ಅಸ್ತಿತ್ವಕ್ಕಾಗಿ ಸಿಡಿದೇಳುವುದು ದೂರದ ಮಾತು ಎನ್ನುವುದು ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ನೇರ ಕಥಾನಕದ ನಿರೂಪಣೆಯ ಮೂಲಕ ಸ್ಪಷ್ಟವಾಗುತ್ತದೆ.”೨೭

ಸಿಂಬಾವಿಯ ಗುತ್ತಿ, ಬೆಟ್ಟಳ್ಳಿಯ ತಿಮ್ಮಿ ಇವರಿಬ್ಬರ ಬದುಕು ಈ ನೆಲೆಯಲ್ಲಿ ತುಂಬ ಗಮನಾರ್ಹ. ಹೆಗ್ಗಡೆಯವರ ಮನೆತನಗಳು ಒಡೆದರೆ ಹೊಲೆಯರ ಗುಡಿಸಲುಗಳೂ ಭಾಗವಾಗುತ್ತವೆ. ಒಡೆಯರ ಕಡ್ಡಾಯದ ಧೋರಣೆಗಳು ಗುತ್ತಿ, ತಿಮ್ಮಿಯರು ಒಂದಾಗಲು ಬಿಡದೆ ಹೋಗುವುದು, ಕಡೆಗೆ ಗುತ್ತಿ ಪೋಲೀಸರಿಗೆ ಬೇಕಾದ ವ್ಯಕ್ತಿಯಾದಾಗ ಆ ಇಬ್ಬರು ಪ್ರೇಮಿಗಳು ಅಲ್ಲಿಂದ ಪರಾರಿಯಾಗುವುದು ಅತ್ಯಂತ ಮುಖ್ಯ ಸಂಗತಿಯಾಗಿದೆ. ಗುತ್ತಿ, ತಿಮ್ಮಿಯರು ಬೆಟ್ಟಳ್ಳಿ, ಸಿಂಭಾವಿ ಒಡೆಯರನ್ನು ಬಿಟ್ಟು ಮೂರನೆ ಒಡೆಯರನ್ನು ಹುಡುಕಿ ಹೊರಡುವ ಪ್ರಕ್ರಿಯೆ ಆ ವ್ಯವಸ್ಥೆಯನ್ನು ಧಿಕ್ಕರಿಸುತ್ತದೆ. ಗುತ್ತಿಯಂಥ ಜೀತಗಾರರು ತಮ್ಮ ಬದುಕನ್ನು ರೂಪಿಸಿಕೊಳ್ಳಲು ಹೀಗೆ ಮಾಡುವುದು ಅನಿವಾರ್ಯ ಎಂಬುದನ್ನು ಕಾದಂಬರಿ ಧ್ವನಿಸುತ್ತದೆ.

ಜಾತಿಯ ಮೇಲರಿಮೆಯ ಕಾರಣದಿಂದ ಶೂದ್ರರನ್ನು ಕೀಳಾಗಿ ಕಾಣುವ ಮಾತನಾಡಿಸುವ ಹೀನ ವರ್ತನೆಯ ವಿರುದ್ಧ ಕುವೆಂಪುರವರ ನಿಶಿತ ವಿಚಾರಧಾರೆ ಕಾದಂಬರಿಯಲ್ಲಿ ಸದಾ ಪ್ರಹಾರ ಮಾಡಿರುವುದನ್ನು ಕಾಣಬಹುದು. ಎಣ್ಣೆ ಕಾಮಧೇನುವಿನ ಕೆಚ್ಚಲಲ್ಲಿದ್ದರೂ ಅಷ್ಟೇ, ಕೆಂದ ಹಸುವಿನ ಕೆಚ್ಚಲಲ್ಲಿದ್ದರೂ ಅಷ್ಟೇ. ತ್ಯಾಜ್ಯವೇ ವಿನಃ ಪೂಜ್ಯವಲ್ಲ. ಕೆಟ್ಟದ್ದು ಎಲ್ಲಿದ್ದರೂ ತಿರಸ್ಕಾರ ಯೋಗ್ಯವೇ ವಿನಃ ಪುರಸ್ಕೃತವಾಗುವುದಿಲ್ಲ ಎಂಬ ದೃಷ್ಟಿ, ವ್ಯಕ್ತಿ ವ್ಯಕ್ತಿಯ ನಡುವಿನ ಸಂಬಂಧ ಹಾಗೂ ವರ್ತನೆಯಲ್ಲಿ ಅಸಮಾನತೆ, ಮೇಲು-ಕೀಳು ಎಂಬ ಭಾವನೆ ಬರಬಾರದೆಂಬ ವೈಚಾರಿಕ ನಿಲುವನ್ನು ಕಾಣಬಹುದು.

ಮೇಲುವರ್ಗದ ಜನ ಕೆಳವರ್ಗದವರನ್ನು ಯಾವ ರೀತಿ ಸಂಭೋಧಿಸುತ್ತಿದ್ದರು ಎಂಬುದನ್ನು ನೋಡುವುದಾದರೆ ಕಾಡಿನ ಪ್ರಯಾಣ ಮಾಡಿ ಬಂದ ನಾಯಿಗುತ್ತಿಯನ್ನು ಲಕ್ಕುಂದ ಹಳೇಪೈಕದ ಮುಖಂಡನಂತಿದ್ದ ಸೇಸನಾಯ್ಕ ಮಾತನಾಡಿಸುತ್ತಾನೆ. ಗುತ್ತಿಯ ಕಾಲಿಗೆ ಹಿಡಿದ ಜಿಗಣೆಗಳನ್ನು ಕಂಡು "ನಿನ್ನ ಮನೆ ಮಂಟೇನಾಗಲೋ! ದೀಪ ಇಲ್ಲೇ ಇಟ್ಟು ಹೋಗ್ತೀನಿ, ಬಟ್ಟೇ ಗಿಟ್ಟೇ ಬಿಚ್ಚಿ ಸರಿಯಾಗಿ ನೋಡ್ಕೋ! ಇನ್ನೊಂದು ಗಂಟೇನೇ ಬೇಕು ಅಂತ ಕಾಣ್ತದೆ ಎಲ್ಲಾ ತೆಗೆದು ಪೂರೈಸಾಕೆ! ಹಹ್ಹ! ಹೊಲೆಮುಂಡೇಗಂಡ!"೨೮ ಎನ್ನುತ್ತಾನೆ. ಹೇಳುವ ರೀತಿಯಲ್ಲಿ ಆತ್ಮೀಯತೆ ಇದ್ದರೂ ತಾನು ಕೀಳುಜಾತಿಯವನ ಕೂಡ ಮಾತನಾಡುತ್ತಿದ್ದೇನೆ ಎಂಬ ಪ್ರಜ್ಞೆ ಇಲ್ಲದೆ.

ಹಿಂದೂ ಸಮಾಜದಲ್ಲಿ ತಮ್ಮ ಜೀತದಾಳನ್ನು ಚಿರಾಸ್ತಿಯಂತೆ ನೋಡಿಕೊಳ್ಳುವ ಕಲ್ಲೇಗೌಡರು ಹಳೆ ಪೈಕದವರನ್ನು ಜೀತದಾಳಂತೆ ಚರಾಸ್ತಿಯಂತೆ ನಡೆಸಿಕೊಳ್ಳುವ ರೀತಿ ಇವೇ ಮೊದಲಾದ ಪ್ರಸಂಗಗಳಲ್ಲಿ ಕೆಳವರ್ಗದವರನ್ನು ಮೇಲು ವರ್ಗದವರು ಕಾಣುವ ರೀತಿಯನ್ನು ಎತ್ತಿ ತೋರಿದ್ದಾರೆ. ದೋಣಿ ದಾಟುವಾಗ ತಮ್ಮಣ್ಣ ನೋಡುತ್ತಾನೆ, ಗೌಡರು ಕುಳಿತಲ್ಲಿ ಕೊಡೆಗಳು ಸೂಡಿವೆ. ಕೊಡೆ ಹಿಡಿದಿರುವವರು ಗೌಡರೆಂದು ತಿಳಿದರೂ ಗಟ್ಟಿಯಾಗಿ ಅಬ್ಬರಿಸಿ "ಯಾರ್‍ರೋ ಅದು! ಕೊಡೆ ಸೂಡಿದೋರು! ಸಿಡಿಸ್ತೀರೋ ಇಲ್ಲೇ, ಕಾಣಾದಿಲ್ಲೆ ಗಾಳಿ ಬೀಸಾದು"೨೯. ಒಂದು ಕಾಲಕ್ಕೆ ಸಮಾಜದ ಉತ್ತಮ ವರ್ಗದವರನ್ನು ಬಿಟ್ಟು ಉಳಿದವರಾರೂ ಕೂಡ ಕೊಡೆ ಸೂಡುವುದಿರಲಿ , ಚಪ್ಪಲಿ ಮೆಟ್ಟುವುದೂ ನಿಷಿದ್ಧವಾಗಿತ್ತು. ಹೀಗೆ ಕುವೆಂಪು ಎಲ್ಲ ವರ್ಗಗಳ ಬದುಕಿನ ನಾನಾ ಮಗ್ಗುಲುಗಳಿಗೆ ಕನ್ನಡಿ ಹಿಡಿದಿದ್ದಾರೆ.

ತಿಮ್ಮ ಗುತ್ತಿಯೊಡನೆ ಓಡಿಹೋದ ಪರಿಣಾಮವಾಗಿ ಕಲ್ಲೇಗೌಡರು ಆಕೆಯ ಅಣ್ಣ ಸಣ್ಣಬೀರನನ್ನು ಎಳೆದು ತರಿಸಿದಾಗ ಸಣ್ಣಬೀರ ಹೋದ ರೀತಿ ಆ ಕಂಬವನ್ನು ತಬ್ಬಿ ನಿಂತ ರೀತಿ ಯೂಪ ಸ್ತಂಭಕ್ಕೆ ಬಲಿಯಾಗಲು ಸಿದ್ಧವಿರುವ ಯಜ್ಞಪಶುವಿನಂತಿತ್ತು. ತಿಮ್ಮಿಯ ವಿಷಯ ತನಗೇನು ತಿಳಿದಿಲ್ಲ ಎಂದರೂ ಆತನಿಗೆ ಇಜಾರದ ಸಾಬಿಯಿಂದ ಕಲ್ಲಯ್ಯ ಗೌಡರು ಹೊಡೆಸುವ ರೀತಿ ಜೀತಪದ್ಧತಿಯ ಭೀಕರತೆಯನ್ನು ಸಮರ್ಥವಾಗಿ ಬಿಂಬಿಸುವಂತಿದೆ.

"ಕಲ್ಲಯ್ಯಗೌಡರಿಂದ ಪೆಟ್ಟು ತಿಂದ ಸಣ್ಣಬೀರನಿಗೆ ಬಂದು ಕೆಟ್ಟ ಶಬ್ಧದ ಬೈಗುಳವನ್ನಾಗಲಿ, ಸ್ವಗತದಲ್ಲಾದರೂ ಆಡದಿರುವುದು ಆಶ್ಚರ್ಯವೆನಿಸುತ್ತದೆ. ಇದೇ ದೋಷವನ್ನು ಕಾರಂತರ ಚೋಮನಲ್ಲೂ ಕಾಣುತ್ತೇವೆ. ಈ ಪಾತ್ರಗಳು ತೀರಾ ಸುಸಂಸ್ಕೃತವಾದ ಯಜ್ಞಪಶುಗಳಂತೆ

ಗೋಚರಿಸುತ್ತವೆ. ಸಣ್ಣವೀರ ಗುತ್ತಿಗಿಂತ ಜಾಣನಲ್ಲ, ಗುತ್ತಿ ಪೊಲೀಸರಿಂದ ಹೇಗೆ ತಪ್ಪಿಸಿಕೊಳ್ಳಬೇಕೆಂದು ಬಲ್ಲ. ಆದರೆ ಸಣ್ಣ ಬೀರನಿಗೆ ಬುದ್ಧಿ ಬೆಳೆದಿಲ್ಲ. ವ್ಯವಸ್ಥೆಯ ವಿರುದ್ಧ ಬಂಡಾಯವೇಳುವಂತೆ ಅವನಿಂದ ಅಪೇಕ್ಷಿಸುವುದು ಅತಿಯಾಗುತ್ತದೆ.'' ೩೦

ಮನುಷ್ಯನ ವರ್ತನೆ ಪ್ರವೃತ್ತಿ ಪರವಾದದ್ದು. ಹಾಗೇನಾದರು ಕಾದಂಬರಿಕಾರರು ಪಾತ್ರ ಸೃಷ್ಟಿಸಿದರೆ ನೈಜವಾಗಿರುತ್ತಿರಲಿಲ್ಲ. ಅದು ಪಾತ್ರೌಚಿತ್ಯರಹಿತವಾಗುತ್ತಿತ್ತು. ವರ್ಗ ಸಂಘರ್ಷದ ತತ್ವವನ್ನಿಟ್ಟುಕೊಂಡರೆ ಪಾತ್ರದ ರೀತಿ, ನೀತಿಯೇ ಬೇರೆ ಬಗೆಯಾದಾಗುತ್ತದೆ. ಇಲ್ಲಿ ಕೃತಿಕಾರನ ಒಲವು ಸಣ್ಣ ಬೀರನ ಪರವಿದೆ. ದಲಿತರ ಪರವಿದೆ ಎಂಬುದು ನಿರ್ವಿವಾದ.

ಕಲ್ಲಯ್ಯಗೌಡರ ಹೆಂಡತಿ ದೊಡ್ಡಮ್ಮ ಹೆಗ್ಗಡತಿ ತನ್ನ ಯಜಮಾನನ ಕ್ರೌರ್ಯ ಪ್ರಯೋಗವನ್ನು ಎಂದೂ ಬೆಂಬಲಿಸಿದವಳಲ್ಲ. ಸಣ್ಣಬೀರನಿಗೆ ಹೊಡೆಸುತ್ತಾರೆಂದು ಗೊತ್ತಾದ ಮೇಲೆ ಮಮ್ಮಲ ಮರುಗಿ ತನ್ನ ಮಗ ದೇವಯ್ಯನಿಗೆ ಹೋಗಿ ಬಿಡಿಸೆಂದು ಯಾಚಿಸುತ್ತಾಳೆ. ಆದರೆ ಕಾಫಿ ತಯಾರಿಸುತ್ತಿದ್ದ ದೇವಯ್ಯ ಅನ್ಯಮನಸ್ಕನಾಗಿ ''ಇರವ್ವಾ ಹೋಗ್ತೀನಿ....... ಆ ಬಡ್ಡಿ ಮಕ್ಕಳಿಗೆ ಬೆನ್ನು ಮುರಿಯೋ ಹಾಗೆ ಒಂದೆರೇಡೆಟು ಬೀಳಲಿ''೩೧ ಎನ್ನುತ್ತಾನೆ.

''ಹೋಗೋ ತಮ್ಮಾ ಬ್ಯಾಗ ಆ ದುಣ್ಣ ಮುಂಡೇಗಂಡ ಸಾಬಿ ಹೊಡೆದು ಕೊಂದೇ ಬಿಟ್ಟಾನೇ! ಆ ಪಾಪ ಹೊತ್ತುಕೊಂಡು ನಾವು ಎಲ್ಲಿ ತೀರಿಸಾನ? ಆ ಸಣ್ಣಬೀರನೋ ಮೊನ್ನೆ ಮೊನ್ನೆ ಮದುವೆ ಆಗ್ಯಾನೆ! ಅಯ್ಯೋ ದೇವರೇ!''೩೨ ಎಂದು ಸುಯ್ದು ಮಗನನ್ನು ಒತ್ತಾಯಿಸುತ್ತಾಳೆ. ತಕ್ಷಣ ಹೊರಟವನು ಮರಳಿ ಧಾವಿಸಿ ಬಂದು ''ಅವ್ವಾ ಅವ್ವಾ, ಒಂದು ಸ್ವಲ್ಪ ತೆಂಗಿನೆಣ್ಣೆ ಕೊಡು.......'' ಎಂದು ಬಡಬಡಿಸುತ್ತಾನೆ. ''ಅವಳೆಲ್ಲಿ? ಆ ಪಾದ್ರಿ ಕೊಟ್ಟಿದ್ದ ಗಾಯಕ್ಕೆ ಹಾಕುವ ಔಷಧ, ಬಿಳಿಪುಡಿ ಬೇಕಿತ್ತಲ್ಲ!'' ಎಂದು ಹುಡುಕುತ್ತಾ ''ನಮ್ಮ ಅಪ್ಪಯ್ಯನಿಗೆ ಯಾವಾಗ ಬುದ್ಧಿ ಬರ್‍ತದೆಯೋ!? ನಾ ಕಾಣೆ''೩೩ ಎಂದು ಬಸುಸುಯ್ದು ಸಣ್ಣಬೀರನ ಗಾಯಗಳಿಗೆ ಔಷಧೋಪಚಾರ ಮಾಡಲು ಹೋಗುತ್ತಾನೆ.

ಅಸ್ಪೃಶ್ಯನ ಮೇಲೆ ತಿರಸ್ಕಾರವಿದ್ದರೆ ದೇವಯ್ಯ ಇಷ್ಟೊಂದು ಚಡಪಡಿಸುತ್ತಲೇ ಇರಲಿಲ್ಲ. ಆದರೆ ಇಲ್ಲಿ ನಾವು ಗಮನಿಸಬೇಕಾದದ್ದು ಎರಡು ತಲೆಮಾರುಗಳ ನಡುವಿನ ಅಂತರವನ್ನು ಹಿರಿಯ ತಲೆಮಾರು, ಕೆಳವರ್ಗದವರನ್ನು ನಡೆಸಿಕೊಳ್ಳುವ ರೀತಿಗೂ ಹೊಸ ತಲೆಮಾರು ಅವರನ್ನು ಕಾಣುವ ದೃಷ್ಟಿಗೂ ಇರುವ ವ್ಯತ್ಯಾಸವೇನೆಂಬುದನ್ನು ಗಮನಿಸಬಹುದು.

ಒಟ್ಟಾರೆಯಾಗಿ ಜೀತಪದ್ಧತಿ ಭಾರತೀಯ ಪರಂಪರೆಯಲ್ಲಿಯೇ ಬಂದಂತಹ ಒಂದು ಅನಿಷ್ಟ ಪದ್ಧತಿಯಾಗಿದೆ. ಜಾತಿ ಪದ್ಧತಿಯಷ್ಟೇ ಕ್ರೂರವಾದ ಜೀತಪದ್ಧತಿಯ ಒಂದು ವಿರಾಟ್ ದರ್ಶನವನ್ನ ಕಾದಂಬರಿ ನೀಡುತ್ತದೆ. ಮಾತ್ರವಲ್ಲ ಸರ್ವೋದಯ ಪರಿಕಲ್ಪನೆಯನ್ನು ಬಲವಾಗಿ ಪ್ರತಿಪಾದಿಸಿದ

ಕುವೆಂಪು ಶೂದ್ರ ಭೂ ಮಾಲೀಕರ ಜೀತಪದ್ಧತಿಯನ್ನು ಜೀವಂತವಾಗಿ ಚಿತ್ರಿಸುವುದರ ಜೊತೆಯಲ್ಲಿಯೇ ಅಲ್ಲಲ್ಲಿ ಜೀತಪದ್ಧತಿಗೆ ಒಳಗಾದ ದಲಿತರ ಬಗ್ಗೆ ಸಹಾನುಭೂತಿಯನ್ನು ತೋರಿ ಅವರು ವ್ಯವಸ್ಥೆಯನ್ನು ಪ್ರತಿಭಟಿಸುವ ಚಿತ್ರಣವನ್ನು ಸಮರ್ಥವಾಗಿ ತಂದಿದ್ದಾರೆ.

ಅಡಿ ಟಿಪ್ಪಣಿಗಳು:

೧. ಬಿ.ಕೃಷ್ಣಪ್ಪ: ಕುವೆಂಪು ಕಾದಂಬರಿಗಳಲ್ಲಿ ದಲಿತ ಜೀವನ ಚಿತ್ರಣ ಲೇಖನ ಪುಟಸಂಖ್ಯೆ-೧೧೮
೨. ಕುವೆಂಪು : ವಿಚಾರಕ್ರಾಂತಿಗೆ ಆಹ್ವಾನ-ಪುಟಸಂಖ್ಯೆ-೭೨
೩. ಕುವೆಂಪು : ಮಲೆಗಳಲ್ಲಿ ಮದುಮಗಳು ಪುಟಸಂಖ್ಯೆ-೪೨೬-೨೭
೪. ಅದೇ ಪುಟಸಂಖ್ಯೆ-೪೨೪
೫. ರಾ.ಗುರುಪಾದ ಮರಿಗುದ್ದಿ: ಕುವೆಂಪು ಕಾದಂಬರಿಗಳು, ಲೇಖನ ಜಿ.ಎಸ್.ಅಮೂರ:ಕುವೆಂಪು ಕಾದಂಬರಿಗಳಲ್ಲಿ ಪ್ರಕೃತಿ ಮತ್ತು ಸಂಸ್ಕೃತಿ ಪುಟಸಂಖ್ಯೆ-೨೪೩
೬. ಕುವೆಂಪು: ಮಲೆಗಳಲ್ಲಿ ಮದುಮಗಳು ಪುಟಸಂಖ್ಯೆ- ೯೦
೭. ಅದೇ, ಪುಟಸಂಖ್ಯೆ-೯೧
೮. ಅದೇ, ಪುಟಸಂಖ್ಯೆ-೫೨೩
೯. ಅದೇ ,ಪುಟಸಂಖ್ಯೆ-೪೪೪-೪೫
೧೦. ಅದೇ, ಪುಟಸಂಖ್ಯೆ-೧೯೭
೧೧. ಅದೇ, ಪುಟಸಂಖ್ಯೆ-೧೧೨
೧೨ಅದೇ ,ಪುಟಸಂಖ್ಯೆ-೫೨೩
೧೩ ಅದೇ, ಪುಟಸಂಖ್ಯೆ-೬೦೪
೧೪ಅದೇ ,ಪುಟಸಂಖ್ಯೆ-೦೮
೧೫ಅದೇ, ಪುಟಸಂಖ್ಯೆ-೧೨೮
೧೬ಅದೇ, ಪುಟಸಂಖ್ಯೆ-೧೨೮
೧೭ಅದೇ, ಪುಟಸಂಖ್ಯೆ-೬೬೧
೧೮ಅದೇ, ಪುಟಸಂಖ್ಯೆ-೬೩
೧೯. ದೇ.ಜವರೇಗೌಡ: ಸಹ್ಯಾದ್ರಿ, ಕುವೆಂಪು ಅಭಿನಂದನಾ ಗ್ರಂಥ, ಲೇಖನ ಸದಾಶಿವ ಎಣ್ಣೆಹೊಳೆ-ಕುವೆಂಪು ಕಾದಂಬರಿಗಳಲ್ಲಿ ಬ್ರಾಹ್ಮಣ ಶೂದ್ರ ಪ್ರಜ್ಞೆ, ಸಹ್ಯಾದ್ರಿ: ಕುವೆಂಪು ಅಭಿನಂದನಾ ಗ್ರಂಥ.
೨೦ ಕುವೆಂಪು : ಮಲೆಗಳಲ್ಲಿ ಮದುಮಗಳು ಪುಟಸಂಖ್ಯೆ-೨೩೫
೨೧ಅದೇ, ಪುಟಸಂಖ್ಯೆ-೪೨೪
೨೨. ರಾ.ಗುರುಪಾದ ಮರಿಗುದ್ದಿ: ಕುವೆಂಪು ಕಾದಂಬರಿಗಳು, ಸಾಂಸ್ಕೃತಿಕ ಅಧ್ಯಯನ ಪುಟಸಂಖ್ಯೆ-೨೪
೨೩. ಕುವೆಂಪು : ಮಲೆಗಳಲ್ಲಿ ಮದುಮಗಳು ಪುಟಸಂಖ್ಯೆ-೩೩೪
೨೪. ಮ.ನ.ಜವರಯ್ಯ :ಪರಂಪರೆ ಮತ್ತು ದಲಿತ ಬಂಡಾಯ ಸಮಗ್ರ ಅಧ್ಯಯನ, ಪುಟಸಂಖ್ಯೆ-೮೮
೨೫ ಪ್ರಬುದ್ಧ ಕರ್ನಾಟಕ: ಲೇಖನ, ಪಿ.ಬೆಟ್ಟೇಗೌಡ : ಮಲೆಗಳಲ್ಲಿ ಮದುಮಗಳು, ಪುಟಸಂಖ್ಯೆ-೨೬
೨೬. ಕುವೆಂಪು: ಮಲೆಗಳಲ್ಲಿ ಮದುಮಗಳು, ಪುಟಸಂಖ್ಯೆ-೩೨೫

೨೭. ಡಾ॥ ಅರವಿಂದ ಮಾಲಗತ್ತಿ: ದಲಿತ ಯುಗ ಮತ್ತು ಕನ್ನಡ ಸಾಹಿತ್ಯ, ಪುಟಸಂಖ್ಯೆ-೧೧೯

೨೮. ಕುವೆಂಪು : ಮಲೆಗಳಲ್ಲಿ ಮದುಮಗಳು ಪುಟಸಂಖ್ಯೆ-೧೯

೨೯. ಅದೇ, ಪುಟಸಂಖ್ಯೆ- ೨೯೪

೩೦ ದೇ.ಜ.ಗೌ: ಸಹ್ಯಾದ್ರಿ, ಕುವೆಂಪು ಅಭಿನಂದನಾ ಗ್ರಂಥ, ಲೇಖನ, ಡಿ.ಎನ್.ಜಯಪ್ಪಗೌಡ, ಕುವೆಂಪು ಕಾದಂಬರಿಗಳಲ್ಲಿ ಸಾಮಾಜಿಕ ಪ್ರಜ್ಞೆ, ಪುಟಸಂಖ್ಯೆ- ೭೫೨

೩೧. ಕುವೆಂಪು : ಮಲೆಗಳಲ್ಲಿ ಮದುಮಗಳು ಪುಟಸಂಖ್ಯೆ-೩೪೦

೩೨. ಅದೇ, ಪುಟಸಂಖ್ಯೆ- ೩೩೬

೩೩. ಅದೇ, ಪುಟಸಂಖ್ಯೆ- ೨೪೦

# ೬. ಕೆಳವರ್ಗದ ಪಾತ್ರ ವಿಶ್ಲೇಷಣೆ

ಕುವೆಂಪು ಕಾದಂಬರಿಗಳು ಪ್ರಧಾನವಾಗಿ ಕವಿಯಾದವನ ಕೃತಿಗಳಾಗಿವೆ. ಅಂತೆಯೇ ಅವು ಸಹಜವಾಗಿ ವಿಶಿಷ್ಟವೂ ಆಗಿವೆ. ಪಾತ್ರ ಚಿತ್ರಣದಲ್ಲಿ, ಅವುಗಳನ್ನು ಅನುದ್ವಿಗ್ನ ಮನಸ್ಸಿನಿಂದ, ನಿರ್ಲಿಪ್ತ ಹಾಸ ರುಚಿರ ಚಿತ್ತ ಸಮಾಧಾನದಿಂದ ನಡೆಸುವ ರೀತಿಯಲ್ಲಿ ಜಘನಾಜಘನ್ಯವೆಂಬ ಮೈಲಿಗೆ-ಮಡಿ ಭಾವವಿಲ್ಲದೆ ಸಣ್ಣ ದೊಡ್ಡ ವಿವರಣೆಯಿಂದ ಭೇದವಿಲ್ಲದೆ ತನ್ಮಯತೆಯಿಂದ ಕೃತಿಕರ್ಮ ನಿರ್ವಹಿಸುವ ರೀತಿಯಲ್ಲಿ ಕುವೆಂಪು ಅದ್ಭುತ ಸಾಮರ್ಥ್ಯವನ್ನು ಮೆರೆದಿದ್ದಾರೆ. "ಇಲ್ಲಿನ ಪಾತ್ರಗಳು ಬದುಕಿನಿಂದ ಅನಾಮತ್ತಾಗಿ ಕೃತಿಯೊಳಗೆ ನುಗ್ಗಿ ಬಂದುಬಿಟ್ಟವೋ ಎನ್ನುವಷ್ಟು ಪ್ರಾಕೃತಿಕತೆಯಿಂದ ಮೆರೆಯುತ್ತವೆ."[೧]

"'ಮಲೆಗಳಲ್ಲಿ ಮದುಮಗಳು' ವಿಲ್ಲಿನ ಜೀವನ ಚಿತ್ರಣ ಯಾವುದೇ ಒಂದು ವರ್ಗ ಅಥವಾ ಕೋಮಿನ ಚಿತ್ರಣಕ್ಕೆ ಮಾತ್ರ ಸೀಮಿತಗೊಳ್ಳದೆ ಮಲೆನಾಡಿನ ಎಲ್ಲ ಜಾತಿಯ, ಎಲ್ಲ ಸ್ತರದ ಜನಜೀವನವನ್ನು ಒಳಗೊಳ್ಳಲು ಪ್ರಯತ್ನಿಸಿರುವುದನ್ನು ಕಾಣಬಹುದು. ದಲಿತರು, ಹಳೇಪೈಕದವರು, ಸಾಬರು, ಒಕ್ಕಲಿಗರು, ಬ್ರಾಹ್ಮಣರು, ಬಿಲ್ಲವರು, ಕ್ರೈಸ್ತರು, ಬೋವಿಗಳು, ಸೆಟ್ಟಿಗಳು ಹೀಗೆ ಪಾತ್ರಗಳು ಮಲೆನಾಡಿನ ವರ್ಗ, ಜಾತಿಗಳನ್ನು ಪ್ರತಿನಿಧಿಸಿವೆ. ಕಾದಂಬರಿಯನ್ನು ಓದುವ ಓದುಗ ಅಲ್ಲಿನ ಕ್ರಿಯಾಶೀಲ ಜಗತ್ತಿನಲ್ಲಿ ತಾನೂ ಒಂದು ಪಾತ್ರವಾಗಿ ಬರುವಷ್ಟು ಇಲ್ಲಿಯ ಪಾತ್ರ ಸನ್ನಿವೇಶಗಳು ಜೀವಂತವಾಗಿವೆ."[೨]

ಈ ಜೀವನದ ಲವಲವಿಕೆ , ವೈವಿಧ್ಯ ವಿವರಗಳು ಆಶ್ಚರ್ಯಗೊಳಿಸುವಂತಿವೆ ಎಂಬ ಮಾತು ಅವರ ಸಹೃದಯ ಪ್ರಜ್ಞೆಗೆ ಸಾಕ್ಷಿಯಾಗಿ ಕಾದಂಬರಿಯ ಅಂತಃಸತ್ವವನ್ನು ಬಿಚ್ಚಿ ತೋರಿಸುತ್ತದೆ. ಸನ್ನಿವೇಶ ಪ್ರಧಾನವಾದ ಈ ಕಾದಂಬರಿಯ ಬಿಡಿ ಚಿತ್ರಗಳು ತಮ್ಮಷ್ಟಕ್ಕೆ ತಾವು ಲಕ್ಷ್ಯ ಸೆಳೆದು ಕುತೂಹಲವನ್ನು ಕೆರಳಿಸುತ್ತಾ ಹೋಗುತ್ತವೆ.

ತೀರಾ ಕೆಳವರ್ಗವೆನ್ನುವ, ಅನಾಗರಿಕವೆನ್ನುವ ಅಸಂಖ್ಯಾತ ಪಾತ್ರಗಳು ಕಾನೂರು ಹೆಗ್ಗಡತಿಯಲ್ಲಿದ್ದರೂ, ಮಲೆಗಳಲ್ಲಿ ಮದುಮಗಳವಿನಲ್ಲಿರುವ ಮಹತ್ವ ಅವರಿಗಿಲ್ಲ. ಇಲ್ಲಿ ಅವರೇ ಸಾಮ್ರಾಟರು. ಕಾದಂಬರಿಯ ಆರಂಭದಲ್ಲೇ ಬಂದು ಕಾದಂಬರಿಯುದ್ದಕ್ಕೂ ಆಕ್ರಮಿಸಿಕೊಳ್ಳುವ ಗುತ್ತಿಯ ಪಾತ್ರದ ಹೋರಾಟ ವೈವಿಧ್ಯ ಐತ-ಪೀಂಚಲುವಿನ ಪ್ರಣಯ ಜೀವನ, ಚೀಂಕ್ರ-ದೇಯಿಯರ ದುರಂತಮಯತೆ, ಇವರೆಲ್ಲರ ಜೀವನ ಚಿತ್ರಗಳು ಇಲ್ಲಿ ಸಾರವತ್ತಾಗಿ ಶ್ರೀಮಂತವಾಗಿ ಸನ್ನಿವೇಶಕ್ಕೆ ಪೂರಕವಾಗಿ ಮೂಡಿಬಂದಿವೆ.

ಕಾದಂಬರಿಯಲ್ಲಿ ಬರುವ ಕೆಳವರ್ಗದ ಜೀವನ ಚಿತ್ರಣವನ್ನು ಕುವೆಂಪು ಸಮರ್ಪಕವಾಗಿ ಚಿತ್ರಿಸಿದ್ದಾರೆ. ಮಲೆನಾಡಿನ ಪರಿಸರದಲ್ಲಿ ಬದುಕುವ ಈ ಜನತೆ ವನ್ಯ ಜಂತುಗಳ ಜೊತೆಯಲ್ಲಿ, ಇಂಬಳಗಳ ಸ್ನೇಹದಲ್ಲಿ ಗುಡುಗು ಸಿಡಿಲುಗಳ ಒಡಲಲ್ಲಿ, ನೆರೆಯ ಸಹವಾಸದಲ್ಲಿ, ಜರಿತ ಹಂದಿ ದನಗಳ ಕೊಟ್ಟಿಗೆಯ ಅಪಾಯದ ನೆರೆಯಲ್ಲಿ, ರೋಗ-ರುಜಿನಗಳ ಅಪ್ಪುಗೆಯಲ್ಲಿ, ಅವರ ಬದುಕು

ಸಾಗಬೇಕಾಗಿದೆ. ನಿರಂತರ ಕಷ್ಟ ಕ್ಲೇಷಗಳ ಸರಣಿಯಲ್ಲಿ ಬದುಕುವ, ನಾಗರೀಕತೆಯ ಸೋರಿಕೆ ಸೇರದ ಆ ಜನಕ್ಕೆ ತಟವಟ ತಿಳಿಯದು. ಹುಸಿ ಕಪಟ ಸೇರವು, ಕೃತ್ರಿಮತೆ ಕೂಡದು, ಅವರ ನಡೆ-ನುಡಿ ನೇರ ಅವರ ಆಸೆ-ಆಕಾಂಕ್ಷೆಗಳಿಗೆ ಮಿತಿಯುಂಟು.

## ಗುತ್ತಿ-ತಿಮ್ಮಿ :

'ಮಲೆಗಳಲ್ಲಿ ಮದುಮಗಳು' ಕಾದಂಬರಿ ಒಂದು ಅನ್ಯ ಪಾತ್ರದಿಂದ ಆರಂಭವಾಗದೆ ಕಾದಂಬರಿ ಚಿತ್ರಿಸಿರುವ ಪ್ರಪಂಚದ ಒಳಗಿನವನೇ ಆದ, ವರ್ಗದ ದೃಷ್ಟಿಯಿಂದ ಸಮಾಜದ ಅತ್ಯಂತ ಕೀಳುವರ್ಗಕ್ಕೆ ಸೇರಿದ ಬೌದ್ಧಿಕವಾಗಿ ಕೆಳಮಟ್ಟದವನಾದ ನಾಯಿ ಗುತ್ತಿಯ ಪ್ರಯಾಣದೊಂದಿಗೆ ಆರಂಭವಾಗುತ್ತದೆ. ಇದು ಕಾದಂಬರಿಯ ವೈಶಿಷ್ಟ್ಯತೆಗಳಲ್ಲೊಂದು.

ಗುತ್ತಿ ಹೊರಟಿರುವುದು ತನ್ನನ್ನು ಒಲಿದಿರುವ, ಆದರೆ ಪರಿಸರದ ಒತ್ತಡದಿಂದ ಬೇರೆಯವರನ್ನು ಮದುವೆಯಾಗಬೇಕಾಗಿ ಬಂದಿರುವ ತಿಮ್ಮಿಯನ್ನು ಆ ವಿಷಮ ಪರಿಸ್ಥಿತಿಯಿಂದ ಪಾರುಮಾಡುವ ದೃಢ ನಿರ್ಧಾರದಿಂದ ಮೊದಲ ಅಧ್ಯಾಯದಲ್ಲಿಯೇ ಕಾದಂಬರಿಯ ಬಂಧಕ್ಕೆ ಕಾರಣವಾಗಿರುವ ಈ ವಸ್ತುವನ್ನು ಸೂಚಿಸಲಾಗಿದೆ. ಪ್ರಣಯ ಪ್ರಸಂಗಗಳ ಚಿತ್ರಣ, ಸಮಾಜದ ವಿವಿಧ ಸ್ತರಗಳ ಸಂಬಂಧದ ಚಿತ್ರಣ, ನೈತಿಕ ವಿಕಾಸದ ಚಿತ್ರಣ ಇತ್ಯಾದಿಗಳೆಲ್ಲಕ್ಕೂ ಒಂದು ಸಮಗ್ರತೆಯನ್ನು ಒದಗಿಸಿಕೊಡುವುದರ ಮೂಲಕ ಬಂಧವನ್ನು ಒದಗಿಸುವ ವಸ್ತು ಪಾರು ಮಾಡುವ ಪಾರಾಗುವ ಯತ್ನವೇ ಆಗಿದೆ.

ಕಥಾವಲಯದೊಳಕ್ಕೆ ಭಿನ್ನ ವ್ಯಕ್ತಿಗಳ, ಭಿನ್ನ ಪರಿಸರಗಳ ಪ್ರವೇಶಕ್ಕೆ ಹಾಗು ಕಥಾಕ್ರಿಯೆಯ ಚಾಲನೆಗೆ ಗುತ್ತಿ ಚುಂಬಕ ಕಿಡಿಯಾಗುತ್ತಾನೆ. ಅವನು ಹೆಜ್ಜೆ ಊರಿದ ತಳದ ಸುತ್ತ ಕಥೆ ಪಲ್ಲವಿಸಿಕೊಂಡು ಕಥಾಸರಣಿಯ ಕೂಡು ಎಳೆಯಾಗಿ ಹೊಲೆಯ ಜೀತದಾಳು ಗುತ್ತಿಯನ್ನು ಉಳಿಸಿಕೊಂಡಿರುವುದರಲ್ಲಿ ಧ್ವನಿ ಜೊತೆಗೆ ಕಲಾವಂತಿಕೆಯಿದೆ. ಸಮಾಜ ವ್ಯವಸ್ಥೆಯ ಎಲ್ಲ ಸ್ತರಗಳಲ್ಲಿಯೂ ತನ್ನ ಇರುವಿಕೆಯನ್ನು ಚಾಚಿಕೊಳ್ಳಬಲ್ಲ ಶಕ್ತಿ ಆ ಸ್ತರದ ಪಾತ್ರವೊಂದಕ್ಕೆ ಮಾತ್ರ ಇದೆ. ಬೆಟ್ಟದಲ್ಲಿ ಬಂಡೆಯಂತೆ, ಕಾಡಿನಲ್ಲಿ ಮರದಂತೆ ಪ್ರಕೃತಿಯ ಒಂದಂಶವೇ ಆದ ಗುತ್ತಿ ಕಾದಂಬರಿಯ ಮೇಲ್ಮುಖಗಮನ ಪ್ರಯತ್ನದ ದಾರ್ಶನಿಕ ಪ್ರಜ್ಞೆಯ ಸಂಕೇತವಾಗಿದ್ದಾನೆ.

ಕಾದಂಬರಿಯಲ್ಲಿ ಕಾಣುವ ಮಹಾಪ್ರವಾಹದಲ್ಲಿ, ಜಾತಿಯ ತಿಕ್ಕಾಟದಲ್ಲಿ ಅತ್ಯಂತ ಹಿಂದಿರುವವನು ಗುತ್ತಿ. ಹೊಲೆಯ ಜಾತಿಗೆ ಸೇರಿದ ಇವನು ಕುಳ್ಳನಾದರೂ ಕಟ್ಟುಮಸ್ತಾದ ಆಳು. ಈತ ಸಿಂಬಾವಿ ಭರಮೈ ಹೆಗ್ಗಡೆಯವರ ಜೀತದಾಳು. ಆದರೂ ಆತನೂ ಒಡೆಯ. ತಾನು ಸಾಕಿ ಬೆಳೆಸಿದ ಹುಲಿಯ ಎಂಬ ನಾಯಿಗೆ. ಕಾದಂಬರಿಯ ಆರಂಭ ಈತನ ಪಯಣದೊಂದಿಗೆ. ಒಡೆಯನ ಸೇವಾರ್ಥಕ್ಕಾಗಿ ಹೊರಟಿರುವ ಈತನದು ಬದುಕಿನ ಹೋರಾಟಕ್ಕೆ ಬೀಜರೂಪವಾಗಿರುವ ಕಾಮ ಪ್ರೇರಿತವಾದ ಸಂದೇಶವನ್ನು ಮುಟ್ಟಿಸುವ ಕೆಲಸ. ಅದರ ಹಿಂದೆ ಮೆಚ್ಚಿರುವ ತಿಮ್ಮಿಯನ್ನು ಹಾರಿಸಿಬರುವ ಹುನ್ನಾರವಿದೆ.

ಹೀಗೆ ಕಾಮದ ಮೊಟ್ಟೆಯನ್ನು ತನ್ನ ಒಡಲಲ್ಲಿಟ್ಟುಕೊಂಡಿದ್ದರೂ ಜಡ ಚೇತನನಾಗಿ ಹೊರಟ ಗುತ್ತಿ ತನ್ನ ಪ್ರಯಾಣದಲ್ಲಿ, ಜಾತಿ ವ್ಯವಸ್ಥೆಯೆಂಬ ಮಹಾನಿದ್ರೆಯಲ್ಲಿ ಮುಳುಗಿ ಈಗೀಗ ಕೊಂಚ ಮಂಪರು ಕಳೆದುಕೊಳ್ಳುತ್ತಿರುವ ಪ್ರಪಂಚವನ್ನು ಪ್ರವೇಶಿಸುತ್ತಾನೆ. ಗೌಡರು, ಸೇರೆಗಾರರು, ಶೆಟ್ಟರು, ಹಳೆಪೈಕದವರು, ಬೇಲರು, ಬಲ್ಲವರು ಇತ್ಯಾದಿ ಹಲವು ಜಾತಿಗಳ, ಮದುವೆಯಲ್ಲಿ ಪಲ್ಲಕ್ಕಿ ಬಳಸುವ ಆಸೆ, ಮೇಲ್ಮುಖ ಚಲನೆಯ ಆಶಯವನ್ನು ಪ್ರಕಟಿಸುತ್ತಿರುವ ಆವರಣದಲ್ಲಿ ಗುತ್ತಿ ಈ ಸ್ತರದ ಆಶಯವೇ ಇಲ್ಲದ ಸಮಾಜವೊಂದರ ಪ್ರತಿನಿಧಿಯಾಗಿ ವರ್ತಿಸುತ್ತಾನೆ. ತನ್ನೊಡಲೊಳಗೆ ಮಹಾ ಆಶ್ರಯವನ್ನಿಟ್ಟುಕೊಂಡಿರುವ ಬೀಸೆಕಲ್ಲು ಪ್ರಸಂಗದಲ್ಲಿ ಕೇವಲ ಈತ ಮೂಕ ಪ್ರೇಕ್ಷಕ.

ಕಾದಂಬರಿಯ ಕೇಂದ್ರ ವ್ಯಕ್ತಿ ಗುತ್ತಿ, ತಿಮ್ಮಿಯನ್ನು ಪಡೆಯಲು ಎಷ್ಟು ಶ್ರಮ ವಹಿಸಿದನೆಂಬುದಕ್ಕೆ ಓಡುಹುಳುವಿನ ಪ್ರಸಂಗವೊಂದು ನಿದರ್ಶನ. ತಿಮ್ಮಿ ಗುತ್ತಿಯೊಡನೆ ಓಡಿಬಂದಳು. ಚಿನ್ನಮ್ಮನಂತೆ ಪ್ರೇಮಿಸಿದವನೊಡನೆ ಹೋಗಲು ಗೌಡರ ಹೆಣ್ಣಾದರೇನು? ಹೊಲೆಯನಾದರೇನು? ಆದರೆ ಹೊಲೆಯರಲ್ಲಿ ಹೆಣ್ಣಿಗೆ ಒಬ್ಬನೇ ಎಂದಲ್ಲ. (ಪ್ರೇಮಿಗಳಿಗೆ ಲೆಕ್ಕವಿಲ್ಲ) ಹೀಗಾಗಿ ಆಕೆಗೆ ಗುತ್ತಿಯೊಂದಿಗಿನ ರಸಾನುಭವ ಹೊಸತೂ ಅಲ್ಲ, ಮೊದಲನೆಯದೂ ಅಲ್ಲ. ಗುತ್ತಿಗೂ ಅಷ್ಟೇ ಅವನ ಕೇರಿಯ ಸಣ್ಣನ ಮಗಳಿಂದ ಪಡೆದ ಅನುಭವವನ್ನು ತಿಮ್ಮಿಯಿಂದ ಪಡೆದಂತಾಗಿತ್ತು.

ಹೀಗೆ ಗುತ್ತಿ-ತಿಮ್ಮಯರದೆ ವಿವಾಹ ಪೂರ್ವದಲ್ಲಿ ಲೈಂಗಿಕ ಸಂಬಂಧ ಅನ್ಯ ನೆಲೆಯಿಂದ ಆಗಿದ್ದರೂ, ಯಾರೂ ಯಾರ ಬಗ್ಗೆಯೂ, ಸಂಶಯವನ್ನಾಗಲಿ, ದ್ವೇಷವನ್ನಾಗಲೀ ತಳೆಯುವ ಸ್ಥಿತಿಯಲ್ಲಿರಲಿಲ್ಲ. ಅದು ಕೇವಲ ದೈಹಿಕ ತೃಪ್ತಿಗೆ ಸಂಬಂಧಿಸಿದ ಆಶಯವಾಗಿದೆ. ನೆನಪಿಸಿಕೊಳ್ಳುವಾಗ ಅವರಿಗೆ ಯಾವುದೇ ಬಗೆಯ ಪಶ್ಚಾತ್ತಾಪ ಇಲ್ಲ. ಒಬ್ಬರು ಇನ್ನೊಬ್ಬರಿಗೆ ಮಾಡಿಕೊಂಡ ದ್ರೋಹವೆಂದೂ ಅವರು ಭಾವಿಸುವುದಿಲ್ಲ. ಇಲ್ಲಿ ಲೈಂಗಿಕತೆ ಎಂಬುದು ಹೊಟ್ಟೆಯ ಹಸಿವಿನಷ್ಟೇ ಸಾಮಾನ್ಯ ಸ್ಥಿತಿಯಾಗಿದೆ.

ಆದರೆ ತಾನು ಗುತ್ತಿಯೊಡನೆ ಓಡಿ ಬಂದಿದ್ದೇನೆ ಎಂಬುದನ್ನು ಒಪ್ಪಿಕೊಳ್ಳಲಾರದಷ್ಟು ಸ್ವಾಭಿಮಾನಿ ತಿಮ್ಮಿ. ನಾನು ಇವಳಿಗೆ ಅಧೀನವಾಗದಿದ್ದರೆ ಇವಳು ತನಗೆ ಅಧೀನವಾಗುವ ಚೇತನವಲ್ಲ ಎಂದು ಗುತ್ತಿಯ ಮನ ಒಪ್ಪಿಕೊಂಡಿದ್ದರಿಂದಲೇ ಅವನು ಜೀವನದಲ್ಲಿ ಎಷ್ಟೇ ಕಷ್ಟ ನೋವುಗಳನ್ನು ಅನುಭವಿಸಿದರೂ, ತೃಪ್ತಿಯನ್ನು ಕಂಡುಕೊಂಡರೂ ಒಂದು ರೀತಿಯಿಂದ ಗುತ್ತಿ-ತಿಮ್ಮಿಯರಲ್ಲಿ ಕಾಣುವ ಹೆಣ್ಣು ಗಂಡಿನ ಸಮಾನತೆಯನ್ನು ಕಾದಂಬರಿಯಲ್ಲಿ ಮತ್ತೆಲ್ಲೂ ಅಷ್ಟಾಗಿ ಕಾಣಲಾರೆವು.

ಕೆಳವರ್ಗದಲ್ಲಿ ಮೇಲುವರ್ಗದಂತೆ ಗಂಡು ಹೆಣ್ಣಿನ ನಡುವೆ ಹೆಚ್ಚು ಕಡಿಮೆ ಎಂಬ ಅಂತರವಿಲ್ಲ. ಈ ಮಾತನ್ನು ಮುಕುಂದಯ್ಯ-ಚಿನ್ನಮ್ಮರ ಸಂದರ್ಭಕ್ಕೆ ಹೇಳಲು ಬರುವುದಿಲ್ಲ. ಶಿಷ್ಟ ಬದುಕು ಅವರನ್ನು ಹೆಚ್ಚಿನ ಮಟ್ಟಿಗೆ ಪ್ರಜ್ಞಾಸ್ಥಿತಿಯಲ್ಲಿ ಪ್ರತಿಕ್ರಿಯಿಸುವಂತೆ ಮಾತ್ರ ಮಾಡುತ್ತದೆ.

ಕಾದಂಬರಿಯ ಉದ್ದಕ್ಕೂ ವ್ಯಕ್ತಿ-ವ್ಯಕ್ತಿಗಳ ನಡುವಣ ಅಹಂ, ಕಾಮದ ಭರಾಟೆ, ಕರಗತ ತಾತ್ಕಾಲಿಕ ಶಮನ ಸಾಗುತ್ತಲೇ ಇರುತ್ತದೆ. ಕುವೆಂಪು ತಮ್ಮ ಎಲ್ಲ ಚಿಕ್ಕ-ಪುಟ್ಟ, ದೊಡ್ಡ ಪಾತ್ರಗಳಲ್ಲಿ ಈ ಅಂಶವನ್ನು ಕಾಣಿಸುತ್ತಾರೆ.

ಹುಲಿಕಲ್ಲು ನೆತ್ತಿಯಲ್ಲಿ ರಾತ್ರಿ ನಡೆದುದ್ದನ್ನು ನೆನೆದು ತಿಮ್ಮಿ ಆಡಿದ ಮಾತಿಗೆ ಗುತ್ತಿ ಕಿಸಕ್ಕನೆ ನಗುತ್ತಾನೆ. ಅದೇ ಸಮಯಕ್ಕೆ ತಿಮ್ಮಿ ಎಡವಿ ಬೀಳುತ್ತಾಳೆ. ತಾನು ಎಡವಿದ್ದಕ್ಕೆ ಆತ ನಕ್ಕನೆಂದು ಭಾವಿಸಿದ ತಿಮ್ಮಿ,

''ನಾ ಎಡವಿದ್ರೆ ನಿಂಗೆ ತಮಾಸೆ! ನಾ ನಿನ್ನ ಜತೆಗೆ ಬಂದದ್ದೆ ತಪ್ಪು!

''ಇಲ್ಲಿ ನೋಡ್ದೇನು, ಇಲ್ಲಿ, ಏನದೆ ಅಂತಾ?'' ಎಂದು ತನ್ನ ಎಡದ ತೋಳನ್ನು ಚಾಚಿ ಅದಕ್ಕೆ ಕಟ್ಟಿದ್ದ ತಾಯಿತಿ ತೋರಿಸುತ್ತಾ ಹಂಗಿಸಿದನು.

''ಕಣ್ಣಾಪಂಡಿತರು ಕೊಟ್ಟದ್ದು ಕಣೇ, ಅಂತ್ರ! ಎಂಥಾ ಒಲ್ಲೆ ಅನ್ನೋ ಹೆಣ್ಣನ್ನಾದ್ರೂ ಒಲಿಯೋ ಹಾಂಗೆ ಮಾಡ್ತದಂತೆ, ಅಲ್ಲದಿದ್ರೆ ನನ್ನ ಸಂಗಡ ನೀ ಇಷ್ಟು ಸುಲಭಕ್ಕೆ ಓಡಿ ಬರ್ತಿದ್ಯಾ? ಚುಟಗಿ ಹಾಕಿ ಕರದ್ರೆ ನಾಯಿ ಬರಾಹಂಗೆ?''

''ನಿನಗೊಬ್ಬನಿಗೇ ಅಂತಾ ಮಾಡಿಯೇನೋ ಅವನಿಗೂ ಕೊಟ್ಟಾರೆ ಅವರು!'' ಎಂದಳು ತಿಮ್ಮಿ ತಿರಸ್ಕಾರ ಧ್ವನಿಯಿಂದ ತುಸುರಾಗವಾಗಿ

''ಯಾರಿಗೆ?'' ಬೆಚ್ಚಿ ಕೇಳಿದ ಗುತ್ತಿ, ಸ್ವಲ್ಪ ಅಪ್ರತಿಭನಾದಂತೆ.

''ಯಾರಿಗೆ? ಅವನಿಗೆ! ಬಚ್ಚಗ್ಗೆ! '' ಗೆದ್ದ ದನಿಯಿಂದ ಹೇಳಿದಳು , ಸೋತವನಿಗೆಂಬಂತೆ''೩

ಗುತ್ತಿಗಿಂತ ಮೊದಲೇ ಬಚ್ಚನಿಂದ ಸುಖ ಪಡೆದಿದ್ದ ತಿಮ್ಮಿ ಆ ವಿಚಾರವನ್ನು ಮುಚ್ಚಿಟ್ಟುಕೊಳ್ಳದೆ ಹೇಳಿಬಿಡುತ್ತಾಳೆ. ತಿಮ್ಮಿಗೆ ಅದು ಮಹತ್ವದ್ದಲ್ಲ. ಒಂದು ದಿನ ಕೂಡಿದ್ದ ಮಾತ್ರಕ್ಕೆ ಅವನನ್ನು ಜೀವನದುದ್ದಕ್ಕೂ ಕಟ್ಟಿಕೊಳ್ಳಲು ಸಿದ್ದಳಿಲ್ಲ. ಮೇಲೆ ಹೇಳಿದಂತೆ ಈ ಧೋರಣೆ ಕೇವಲ ಕೆಳವರ್ಗಕ್ಕೆ ಸೀಮಿತವಾದದ್ದು. ಒಟ್ಟಾರೆ ಗುತ್ತಿ-ತಿಮ್ಮಿಯರಿಬ್ಬರೂ ನಿಸರ್ಗದಲ್ಲಿ ಒಂದಾಗಿ ಬೆರೆತು ಹೋಗಿದ್ದರು. ಜೊತೆಗೆ ಆ ಪಾತ್ರಗಳ ಮುಖಾಂತರ ಅವು ಪ್ರತಿನಿಧಿಸುವ, ನಾಗರೀಕ ದೃಷ್ಟಿಯಲ್ಲಿ ಕೇಳುವರ್ಗವೆಂದು ಪರಿಗಣಿಸಲ್ಪಟ್ಟಿರುವ ಅವರ ಜನಾಂಗ ಕೂಡ ನಿಸರ್ಗಕ್ಕೆ ಬೆಸೆದುಕೊಂಡಿರುವುದು ಸ್ಪಷ್ಟವಾಗುತ್ತದೆ.

ಕಾದಂಬರಿಯ ಆರಂಭದಲ್ಲಿ ಬರುವ ಗುತ್ತಿಯ ಪಾತ್ರ ಮಹತ್ವ ಪೂರ್ಣವಾದುದು. ಗುತ್ತಿ-ತಿಮ್ಮಿಯರು ನಿಸರ್ಗದೊಡನೆ ನಿಕಟ ಸಂಪರ್ಕ ಇಟ್ಟುಕೊಂಡವರು. ಅವರ ಪ್ರಣಯವೂ ಅಷ್ಟೇ ನೈಜವಾದದ್ದು. ಅದೇ ಗುತ್ತಿ-ತಿಮ್ಮಿಯನ್ನು ಮದುವೆಯಾಗುವ ಸಾಹಸ ವಿಶಿಷ್ಟವಾದುದು. ಅವನು ಈ ಸಮಾಜದ ದುರ್ಬರ ಪರಿಸರದಲ್ಲಿ ಹೋರಾಡಬೇಕಾಗಿ ಬಂತು. ಕ್ರಮೇಣ ಅವನಲ್ಲಿ ಉಂಟಾದ ಸಾಮಾಜಿಕ ಪ್ರಜ್ಞೆಯ ಚಿತ್ರಣ ಬಹುಸಹಜವಾಗಿ ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಗುತ್ತಿ ಪೋಲೀಸರಿಂದ ತಪ್ಪಿಸಿಕೊಂಡು ಹೋಗುವಾಗ ಮಾರ್ಗ ಮಧ್ಯದಲ್ಲಿ ಆಲೋಚಿಸುವ ರೀತಿ ಕುತೂಹಲಕಾರಿಯಾದುದು.

"ನಾನು ಹೊಲೇರವನಲ್ಲದೆ ಬ್ಯಾರೆ ಜಾತಿಯವನಾಗಿದ್ದರೆ ಹಿಂಗಾಗ್ತಿತ್ತೇ ಗೌಡರ ಜಾತಿಗೆ? ಸೆಟ್ಟರ ಜಾತಿಗೆ? ಬಿರಾಂಬರ ಜಾತಿಗೆ?..... ಊಹ್ಞೂ ಈ ಜನ್ಮದಾಗ ಅದೆಲ್ಲಿ ಸಾಧ್ಯ? ಸಾಬರ ಜಾತಿಗೆ, ಕಿಲಸ್ತರ ಜಾತಿಗೆ ಥೂ ಥೂ ಥೂ......"೪ ಗುತ್ತಿಯ ಬಾಯಿಯಿಂದ ಬರುವ ಈ ಮಾತುಗಳು ಅವನ ಸುತ್ತಲೂ ಸಾಮಾಜಿಕ ಪರಿಸರದ ಪ್ರಭಾವಕ್ಕೆ ಅವನು ತೋರಿಸಿದ ಪ್ರತಿಕ್ರಿಯೋಪಾದಿಯಲ್ಲಿದೆ.

ನಂತರ, ಗುತ್ತಿ ಈ ಪರಿಚಿತ ನಾಡನ್ನೇ ಬಿಟ್ಟು ತಿಮ್ಮಿಯೊಂದಿಗೆ ಹೊಸ ಬದುಕನ್ನು ಅರಸುತ್ತಾ ತುಂಗಾ ನದಿಯ ಪ್ರವಾಹ ದಾಟಿ, ತನ್ನ ಹಳೆಯ ಒಡೆಯರಿಗೆ ಹೋಲಿಸಿದರೆ ಸ್ವಲ್ಪ ನಾಗರಿಕರಂತೆ ಕಾಣುವ ಹೊಸ ಒಡೆಯರ ನಾಡಿಗೆ ಹೋಗುತ್ತಾನೆ. ಹೋಗುವಾಗ ಹಿಂದಿನ ಜನ್ಮದ ಕರ್ಮದಂತೆ ಸದಾ ತನ್ನ ಬೆನ್ನ ಹಿಂದೆ ಬಿದ್ದಿರುತ್ತಿದ್ದ ಹುಲಿಯನನ್ನು ನದಿಯ ಪ್ರವಾಹದಲ್ಲಿ ಕಳೆದುಕೊಳ್ಳುತ್ತಾನೆ. ಕಾಮವೇ ನೆಪವಾಗಿ ತನ್ನ ಜಾತಿಮೂಲವಾದ ಅಸಹಾಯಕತೆ, ಕೀಳ್ತನಗಳಿಗೆ ಜಾಗೃತವಾದ ಒಂದು ಚೇತನ ಹೊಸ ಹುಟ್ಟನ್ನರಸುತ್ತ ಹೊಸ ನಾಡಿಗೆ ಹೋಗುವುದರೊಂದಿಗೆ ಗುತ್ತಿಯ ಕಥೆ ಮುಗಿಯುತ್ತದೆ.

ಎಲ್ಲಾ ವಿಧದಲ್ಲೂ, ಬದುಕುವುದಕ್ಕಾಗಿ ಹೋರಾಟದ ಮನೋಭಾವವನ್ನು ಗುತ್ತಿ ಪ್ರಕಟಿಸುತ್ತಾನೆ. ಕೃತಿಯ ಎಲ್ಲ ಪಾತ್ರಗಳೊಡನೆಯೂ ಇದು ವಿಶಿಷ್ಟವಾಗಿ ನಿಲ್ಲಲು ಪ್ರಯತ್ನಿಸಿದೆ. ಇದಕ್ಕೆ ಬಹುಮುಖ್ಯ ಕಾರಣ ಗುತ್ತಿಗೆ ಸ್ಥಿರಾಸ್ತಿ ಇಲ್ಲದಿರುವುದು. ಸ್ವಲ್ಪ ಪ್ರಮಾಣದಲ್ಲಾದರೂ ಸ್ಥಿರಾಸ್ತಿ ಇದ್ದಿದ್ದರೆ ಸ್ಥಳೀಯ ಆಕ್ರಮಣ ಮತ್ತು ವಿರೋಧಗಳನ್ನು ತಿರಸ್ಕರಿಸಿ ಬದುಕುವುದು ಸಾಧ್ಯವಿರುತ್ತಿತ್ತು. ದುಡಿಸಿಕೊಳ್ಳುವ ಒಡೆಯರು ಗುತ್ತಿಯ ಆಸೆ ಆಕಾಂಕ್ಷೆಗಳ ಹಿನ್ನೆಲೆಯಲ್ಲೂ ಒಂದು ಹೆಣ್ಣಿನ ಪ್ರವೇಶವನ್ನು ಯೋಚಿಸದೆ, ದುಡಿಯುವ ಹೆಚ್ಚಿನ ಆಳು ದೊರೆತಂತಾಯ್ತು ಎಂದು ಹಿಗ್ಗುವುದರ ಜೊತೆಗೆ ಸಮಾನ ಧರ್ಮೀಯರ ವೈಯಕ್ತಿಕ ದ್ವೇಷಾಸೂಯೆಗಳನ್ನು ಮುಖ್ಯವಾಗಿ ಪರಿಗಣಿಸುತ್ತಾರೆ. ಇಂಥ ಆವರಣದಲ್ಲಿ ಗುತ್ತಿ ಬದುಕುವುದರಿಂದ, ಸ್ಥಳೀಯವಾಗಿ ನೆಲೆಯಿಲ್ಲದವನಾಗುವುದು ಅನಿವಾರ್ಯವಾಗುತ್ತದೆ. ತಿಮ್ಮಿಯನ್ನು ತವರಿನಿಂದ ಹಾರಿಸಿಕೊಂಡು ಬರುವುದು, ಸಾಬರೊಡನೆ ಹೋರಾಡುವುದು, ಪೋಲೀಸರ ಕಣ್ಣು ತಪ್ಪಿಸಿ ಪರಾರಿಯಾಗುವುದು, ಸ್ಥಳೀಯ ಬದುಕಿನ ಆವರಣವನ್ನು ಬಿಟ್ಟು ಅನ್ಯ ನೆಲೆಯನ್ನು ಅರಸಿ ಹೋಗುವುದು ಇವು ಗುತ್ತಿಯ ಬದುಕುವ ಛಲವನ್ನು ನಿರ್ದೇಶಿಸುತ್ತವೆ.

ಒಂದು ಪಾತ್ರದ ಮೂಲಕವೇ ಕಥೇ ತನ್ನ ಹರಹನ್ನು ಹಿಗ್ಗಿಸಿಕೊಳ್ಳುತ್ತಾ, ಕ್ರಿಯೆಗೆ ಒಂದು ಚೌಕಟ್ಟನ್ನು ನಿರ್ಮಿಸಿಕೊಂಡರೂ ಆ ಪಾತ್ರವು ಪ್ರಮುಖವೂ ಆಗದೆ, ಅಮುಖ್ಯವೂ ಆಗದೆ ನಿಲ್ಲುವುದು ಒಂದು ವಿನೂತನ ವಿನ್ಯಾಸ. ಮೊದಲಿನಿಂದ ಕೊನೆಯವರೆಗೆ ಕಾದಂಬರಿಯ ಉದ್ದಗಲಕ್ಕೂ ಮೈ ಚಾಚಿನಿಂತ ವ್ಯಾಸ ರೇಖೆಯಾಗಿಲ್ಲ, ಗುತ್ತಿ ಆರಂಭದ ಅಧ್ಯಾಯಗಳಲ್ಲಿ ಪೂರ್ಣ ಪ್ರಮಾಣದಲ್ಲಿ ನಿಶಿತವಾಗಿ ಚಿತ್ರಿತಗೊಂಡು ಕಾದಂಬರಿಯ ಕೊನೆಯವರೆವಿಗೂ ವಾಚಕ ಪ್ರಜ್ಞೆಯಲ್ಲಿ ಬೇರು ಬಿಡುವ ಗುತ್ತಿ ಅನಂತರದ ಬೆಳವಣಿಗೆಯಲ್ಲಿ ಹಿಂದು ಹಿಂದಕ್ಕೆ ಸರಿದು ಹೊಳೆಯನ್ನು ದಾಟಿ ಇಲ್ಲವಾಗುತ್ತಾನೆ. ತಂತ್ರ ವಿನ್ಯಾಸದ ಭೌತಿಕ ಸ್ತರದಲ್ಲಿ ಮುಖ್ಯವಾದಂತೆ, ಸಹಜ ಪ್ರವೃತ್ತಿಗೆ ಹಸಿಹಸಿಯಾಗಿ ಪ್ರತಿಕ್ರಿಯಿಸುವ ನಾಯಿಗುತ್ತಿ, ಅದರ ತಾತ್ವಿಕ ಸ್ತರದಲ್ಲಿ ಅಷ್ಟೇ ಪ್ರಮುಖ ಪ್ರತಿಕ್ರಿಯೆಯಾಗಿಬಿಡುತ್ತಾನೆ.

ಗುತ್ತಿಯಂಥ ಕೀಲುವರ್ಗದ ಪಾತ್ರಗಳನ್ನು ಕೇಂದ್ರವಾಗಿರಿಸಿಕೊಂಡು ವ್ಯವಹರಿಸತೊಡಗುವ ಈ ಕಾದಂಬರಿಯಲ್ಲಿ ಅಭಿವ್ಯಕ್ತವಾಗಿರುವ ಜೀವನದೃಷ್ಟಿ ಮುಖ್ಯವಾಗಿ ನೈತಿಕ ಬೆಂಬಲದಿಂದ ಹದಗೊಂಡ ಜೀವನ, ಅವಿಷ್ಕೃತ ಸತ್ಯಗಳ ಸ್ವರೂಪದ ಅನ್ವೇಷಣೆಯಲ್ಲಿ ತೊಡಗಿದೆ.

ಗುತ್ತಿ ಕಾದಂಬರಿಯ ಅತ್ಯಂತ ಪ್ರಮುಖ ಪಾತ್ರವಾಗಿರುವಂತೆಯೇ ಕೃತಿಯ ವಸ್ತುವಿನ ಸ್ವರೂಪವನ್ನು ಧ್ವನಿಸುವಷ್ಟು ಸತ್ವಶೀಲನಾಗಿರುವುದರಿಂದ ಅವನ ವೈಯಕ್ತಿಕ ಸಮಸ್ಯೆ ಒಂದು ವಿಶಾಲವಾದ ಅರ್ಥದಲ್ಲಿ ಕಾದಂಬರಿಯ ಸಮಸ್ಯೆಯನ್ನು ಪ್ರತಿನಿಧಿಸುವ ಪ್ರಬಂಧಕ ಸಮಸ್ಯೆಯಾಗಿಯೂ ಪರಿಣಮಿಸಬಹುದಾಗಿದೆ. ಮಾತ್ರವಲ್ಲ ಈ ಗುತ್ತಿ ಸಿಂಬಾವಿ ಭರಮೈ ಹೆಗ್ಗಡೆಯವರ ದೊಡ್ಡ ಚೌಕಿ ಮನೆಯ ಜೀತದಾಳು ಎಂಬಲ್ಲಿ ಅವನ ಬೆಂಬದಿಗಿರುವ ಬಲದ ಕಲ್ಪನೆ ಮೂಡುವಂತಾದರೆ ಅವನು ಹೊಲೆಯರ ನಾಯಿಗುತ್ತಿ ಎಂಬಲ್ಲಿ ಅವನ ಸಾಮಾಜಿಕ ಸ್ಥಾನಮಾನದ ಮೂಲಕ ಕಾದಂಬರಿಯ ಶಿಲ್ಪ ಸತ್ವ ಸಮಾಜದ ಯಾವ ಸ್ತರದಿಂದ ಉಗಮವಾಗುತ್ತದೆಂಬುದರ ಸೂಚನೆಯನ್ನು ಕೊಡುವಂತಿದೆ.

## ಹುಲಿಯ (ಗುತ್ತಿನಾಯಿ) :

'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿನ ಹುಲಿಯನ ಪಾತ್ರ ಇಡೀ ಕನ್ನಡ ಸಾಹಿತ್ಯದ ಶ್ವಾನ ಪ್ರಪಂಚದಲ್ಲೇ, ಅಷ್ಟೇ ಏಕೆ ಪ್ರಾಣಿ ಪ್ರಪಂಚದಲ್ಲೇ ಚಿರಸ್ಥಾಯಿಯಾಗಿ ನಿಲ್ಲುವಂಥದ್ದು. 'ಹುಲಿಯ' ಎಂಬ ಹೆಸರೇ ವಿನೂತನ. ಹುಲಿಯ ಹುಲಿಯನಾಗಿ ನಮ್ಮ ಮನಸ್ಸಿನಲ್ಲಿ ನಿಲ್ಲುವುದಕ್ಕಿಂತ ಗುತ್ತಿ ನಾಯಿಯಾಗಿ ಮಿಂಚುತ್ತದೆ. ಹೊಲೆಯ ಗುತ್ತಿಯು ಬೆಟ್ಟದಲ್ಲಿ ಬಂಡೆಯಾಗಿ, ಕಾಡಿನಲ್ಲಿ ಮರದಂತೆ ಅದರ ಒಂದಂಗವಾಗಿ ತಾನು ವಾಸಿಸುತ್ತಿದ್ದ ಸನ್ನಿವೇಶದ, ಪ್ರಕೃತಿಯ ಪ್ರಕೃತಿಯಾಗಿದ್ದಂತೆ ಹುಲಿಯನೂ ನೆಚ್ಚಿನ ಸೇವಕನಾಗಿಯೂ, ಒಡೆಯನ ಒಂದಂಗವಾಗಿಯೂ ಇತ್ತು. ಆದ್ದರಿಂದ ಗುತ್ತಿ ಕೇವಲ ಗುತ್ತಿಯಾಗುಳಿಯದೆ ನಾಯಿಗುತ್ತಿಯಾಗಿದ್ದನು. "ನಾಯಿಯ ಮತ್ತು ಹೊಲೆಯನ ಮನೋಮಯ ಕೋಶಗಳೆರಡೂ ಒಂದನ್ನೊಂದು ಆಲಂಗಿಸಲ್ಪಟ್ಟಿದ್ದವು"೫ ಎಂಬ ಮಾತೇ ಸಾಕು- ಅವರಿಬ್ಬರ ಅವಿನಾಭಾವ ಸಂಬಂಧವನ್ನು ಸೂಚಿಸಲು.

ಹೊಲೆಯ ಗುತ್ತಿ ಕಾದಂಬರಿಯ ಕಥಾ ಬೆಳವಣಿಗೆಗೆ ಕಾರಣನಾದಂತೆ ಗುತ್ತಿಯ ಒಂದಂಗನಾಗಿದ್ದ ಹುಲಿಯನೂ ಪರೋಕ್ಷವಾಗಿ ಕಥಾ ಬೆಳವಣಿಗೆಗೆ ಕಾರಣವಾಗುತ್ತದೆಂಬ ತಾರ್ಕಿಕ ಚೌಕಟ್ಟಿನಲ್ಲಿ ನೋಡಿದಾಗ ಎಲ್ಲರ ಗಮನಕ್ಕೆ ಬರುವಂಥದ್ದು, ಗುತ್ತಿ ಹುಲಿಯರ ಜೋಡಿಯಂತೂ ಆದರ್ಶ ಪ್ರಿಯವಾದುದು, ಮನುಷ್ಯ ಮತ್ತು ಪ್ರಾಣಿಗಳಲ್ಲಿ ಈ ಬಗೆಯ ಗೆಳೆತನ ಸಾಧ್ಯವೇ ಎಂದು ಪ್ರಶ್ನಿಸುವ ಮಟ್ಟಿಗೆ ಇವರಿಬ್ಬರ ಸಂಬಂಧ ಕಾದಂಬರಿಯಲ್ಲಿ ಬೆಳೆದು ಬಂದಿದೆ. ಗುತ್ತಿಗೆ ನಾಯಿಯ ಮೇಲಿರುವ ಪ್ರೀತಿಗಿಂತ ಹುಲಿಯನಿಗೆ ಒಡೆಯನ ಮೇಲಿರುವ ಸ್ವಾಮಿಭಕ್ತಿ ಅಧಿಕವಾದುದು.

"ಹುಲಿಯನ ಬಣ್ಣವನ್ನು ನೋಡಿ ಕೆಲವರು ಅದಕ್ಕೆ 'ಕರಿಯ' ಎಂಬ ಹೆಸರಿಡಲು ಸೂಚಿಸಿದ್ದರೂ ಗುತ್ತಿ ಗುಣಕ್ಕೆ ಮರ್ಯಾದೆ ಕೊಟ್ಟು ತಾನಿಟ್ಟ ಹೆಸರನ್ನೆ ಸಮರ್ಥಿಸಿದ್ದನು"೬ ಇಲ್ಲಿ ಜಾತಿಗನುಗುಣವಾಗಿ ಇಂತಿಂಥ ಹೆಸರುಗಳನ್ನೆ ಇಡಬೇಕೆಂಬ ಮನು ಧರ್ಮಶಾಸ್ತ್ರದ ನಿಲುವನ್ನು ವಿಡಂಬಿಸುವ, ಹಾಗೆಯೇ ಪರೋಕ್ಷವಾಗಿ ಉತ್ತಮ-ಅಧಮ ನಿಷ್ಕರ್ಷೆಗೆ ಹುಟ್ಟು ಅಥವಾ ಬಣ್ಣ ಮುಖ್ಯವಲ್ಲ ಎಂಬ ಶಾಶ್ವತ ಸತ್ಯವನ್ನು ಸಹ ವ್ಯಕ್ತಪಡಿಸಲಾಗಿದೆ. ಗುತ್ತಿಯ ಬದುಕನ್ನು

ಸಂಪೂರ್ಣವಾಗಿ ಹಂಚಿಕೊಳ್ಳುವವರೆಂದರೆ ತಿಮ್ಮಿ ಮತ್ತು ಹುಲಿಯ. ಗುತ್ತಿಯು ತಿಮ್ಮಿಯನ್ನು ಎಷ್ಟು ಪ್ರೀತಿಸುತ್ತಿದ್ದನೋ, ಅದಕ್ಕಿಂತಲೂ ಹೆಚ್ಚಾಗಿ ಹುಲಿಯನನ್ನು ಬಯಸುತ್ತಿದ್ದನು. ಕಾದಂಬರಿಯಲ್ಲಿ ಹುಲಿಯ ಗುತ್ತಿಯ ಪಾತ್ರಕ್ಕೆ ಸಂಕೇತವೂ ಆಗುತ್ತದೆ. ಅವನಷ್ಟೇ ಧೈರ್ಯಶಾಲಿ, ನಂಬಿಕಸ್ಥ, ಸಾಹಸಿ ಗುಣಗಳು ಹುಲಿಯನಲ್ಲೂ ಇವೆ.

ಕಾದಂಬರಿಯ ಪ್ರಾರಂಭದಲ್ಲೇ ತನ್ನ ಯಾತ್ರೆಯನ್ನು ಮೊದಲು ಮಾಡುವ ನಾಯಿಗುತ್ತಿ ಕಾದಂಬರಿಯ ಮುಕ್ಕಾಲು ಪಾಲು ಕಥೆಯವರೆವಿಗೂ ಸಾಗುತ್ತಾನೆ. ಅವನ ನಾಯಿ ಹುಲಿಯನ ಕಥೆ ನಡಿಗೆಯಲ್ಲೇ ಸಾಗುತ್ತದೆ. ಕಾಡು ಮೇಡಿನಲ್ಲಿ, ಕತ್ತಲಲ್ಲಿ ಗುತ್ತಿ ತನ್ನೊಡನೆ ತಿಮ್ಮಿಯನ್ನು ಕರೆದುಕೊಂಡು ಹೋಗುವಾಗಲೂ ಅವರನ್ನು ಬಿಡದೆ ಬೆಂಗಾವಲಾಗಿ ಬರುತ್ತಿದ್ದ ದೈತ್ಯನಾಯಿ ದಟ್ಟ ಕಾಡಿನ ಕಗ್ಗತ್ತಲಲ್ಲಿ ಎಲ್ಲೊ ಚಿರತೆಯನ್ನು ಎದುರಿಸಿ ಹೋರಾಡಿ ಘಾಸಿ ಮಾಡಿ ತಾನೂ ಗಾಯಗೊಳ್ಳುತ್ತದೆ. ಔಷಧೋಪಚಾರ ಮಾಡಿದ ಮೇಲೆ ಮೆಲ್ಲಮೆಲ್ಲನೆ ನಡೆಯುತ್ತ ಸಾಗಿದ ನಾಯಿ, ಕಾಡಿನಲ್ಲಿ ಹಿಂಡು ಹಿಂಡೇ ಹಂದಿಗಳು ಅತ್ತ ಹೋದರೂ ಬೊಗಳದೆ ಜೋಲು ಮೋರೆ ಹಾಕಿಕೊಂಡು ಮುಗ್ಗರಿಸುತ್ತಾ ಬರುತ್ತದೆ.

ನಾಯಿಯ ಸ್ಥಿತಿಯನ್ನು ಕಂಡ ಗುತ್ತಿಗೆ ನೋವೂ, ಅವಮಾನವೂ ಆದಂತಾಗಿ ಅದರ ಉಪಚಾರಕ್ಕೆ ತೊಡಗುತ್ತಾನೆ. ಒಸರುತ್ತಿದ್ದ ಅದರ ಗಾಯಗಳನ್ನು ನೋಡಿ ದುಃಖ ಮಿಶ್ರಿತವಾದ ಸಿಟ್ಟು ಉಕ್ಕಿಬಂತು. ''ಭಾವಾಂದನಾಗಿ ಗುತ್ತಿ ತಿಮ್ಮಿಯ ಕಡೆಗೆ ತಿರುಗಿ ''ಸನಿಮುಂಡೆ, ನಿನ್ನ ದೆಸಿಂದ ನನ್ನ ನಾಯೀನೂ ಹೋಯ್ತಲ್ಲೇ! ಯಾವ ಇಸಗಳಿಗೇಲಿ ಹುಟ್ಟಿದ್ಯೋ ನೀನು, ಹುಲಿಯನ ತಿನ್ನಾಕೆ!''೭ ಎಂದು ಸಿಡುಕುತ್ತಾನೆ. ಅವನ ಕಣ್ಣು ಈಗಾಗಲೇ ಹನಿಗೂಡಿತ್ತು. ತಿಮ್ಮಿಗೆ ಏನೂ ತೋಚಲಿಲ್ಲ. ಮೊದಲಿಗೆ ''ಆ ನಿಂದೆಯ ಆಘಾತಕ್ಕೆ ತಟಕ್ಕನೆ ಬೆಪ್ಪು ಬೆರಗಾದಳು. ಒಡನೆಯೆ ಬಂಡೆಯಬೆಟ್ಟ ದನಿಗೆ ಮರುದನಿ ಕೊಡುವಂತೆ, ನಿಸರ್ಗ ಸಹಜವಾದ ಪ್ರತಿಕ್ರಿಯೆಯೆಂದಲೋ ಎಂಬಂತೆ ''ನಾನ್ಯಾಕೆ ಆದೇನು ಸನಿಮುಂಡೆ? ಬೇಕಾದರೆ ನೀನೆ ಆಗು ಸನಿಮುಂಡೆಗಂಡ''೮

ಇಲ್ಲಿ ಬರುವ ಗುತ್ತಿ-ತಿಮ್ಮಿಯರ ಪರಸ್ಪರ ಭರ್ತ್ಸನವಾದರೂ, ಮದುವೆಯಾಗಲು ಕದ್ದು ಊರು ಬಿಟ್ಟು ಕಾಡು ಮಲೆಗಳನ್ನು ನಟ್ಟಿರುಳಲ್ಲಿ ನಡೆದು ಮೊದಲ ರಾತ್ರಿಯನ್ನು ಕಳೆದ ಮದುಮಕ್ಕಳ ಬೈಗುಳ, ಪರಸ್ಪರ ಅಷ್ಟು ಅನುರಕ್ತರಾದರೂ ಹೀಗೆ ಅಪಸ್ವರ ನುಡಿಯುತ್ತಾರೆಯೇ, ಇಷ್ಟು ಬೇಗ ಎಂದು ಯಾರಾದರೂ ಸಾಮಾನ್ಯ ಕಾದಂಬರಿಕಾರರಾಗಿದ್ದರೆ ಆ ಚಿತ್ರವನ್ನು ಕಲ್ಪಿಸಿಕೊಳ್ಳುತ್ತಲೇ ಇರಲಿಲ್ಲ. ತನ್ನ ದೇಹದ ಒಂದಂಗದಂತಿದ್ದ ಹುಲಿಯ ಗಾಯಗೊಂಡು ನೋವಿನ ನೋಟ ಬೀರಿದಾಗ ಗುತ್ತಿ ಭಾವಾಂದನಾಗಿ ತನ್ನ ತಿಮ್ಮಿಯನ್ನು ಹಾಗೆ ಬೈಯ್ಯುತ್ತಾನೆ.

ನಾಯಿ ಗುತ್ತಿಯರ ನಂಟು ಕೇವಲ ಎರಡು ಜೀವಗಳ ಅಂಟಿನ ನಂಟಿನ ಬಗೆಯನ್ನು ಮಾತ್ರ ಹೇಳುತ್ತಿರುವುದಿಲ್ಲ. ಒಂದು ಸಂಸ್ಕೃತಿಯ ಆತ್ಮ ಸಂಪನ್ನ ನೀತಿ ನಿಯತ್ತುಗಳ ಧಾತುರೂಪವನ್ನೇ ಪ್ರತಿಕ್ರಿಯಿಸುವುದಾಗಿದೆ. ಈ ಕಾರಣದಿಂದಲೇ ನಾಯಿ-ಗುತ್ತಿಯ ಸಂಬಂಧ ಇಡೀ ಸುತ್ತಲಿನ ಜನರ ನಡುವೆ ಹಾಸ್ಯದ ಸಂಗತಿಯಾಗಿ ಬಾಯಿಗೆ ಗಾಸವಾಗಿದ್ದರೂ ಎಲ್ಲರ ಭಾವದಾಳದಲ್ಲಿ ನೆಲೆ ಮಾಡಿದ್ದ ಮೌನ ಗೌರವಕ್ಕೂ ಭಾಜನವಾದ ಬದುಕಾಗಿದೆ. ಹೀಗಾಗಿ ಇದು ಇಡೀ ಅಲಕ್ಷಿತ ಬದುಕಿನ

ಭಾವಸಿರಿಯ ಪ್ರತೀಕವಾಗಿ ಒಡಮೂಡಿದೆ. ಭೂ ಮಾಲೀಕರಿಗೆ ತಮ್ಮ ಭೂಮಿ ಹೇಗೆ ಒಂದು ಉತ್ಪನ್ನ ಆ ಮೂಲಕ ಸಂಪತ್ತೋ ಹಾಗೆ ದನ ಜನ ನಾಯಿ ಎಲ್ಲವೂ ಸಂಪತ್ತಿನ ಭಾಗಗಳೇ. ಜನ-ಜಾನುವಾರುಗಳ ಸಂಬಂಧ ವಿಚಿತ್ರವೆನಿಸಿದರೂ ವಿಶೇಷ ಭಾವದ ಆತ್ಮೀಯ ಅಂತಃಕರಣದ ನಂಟಿನಿಂದ ಬೆಸೆದ ಸಂಬಂಧವಾಗಿರುತ್ತದೆ.

ಗುತ್ತಿಗೆ ನಾಯಿ ವಿಶೇಷಣವಾಗುವ, ನಾಯಿಗೆ ಗುತ್ತಿ ವಿಶೇಷಣವಾಗುವ ನಾಯಿಗುತ್ತಿ, ಗುತ್ತಿನಾಯಿ ಈ ಸಂಬಂಧಾತ್ಮಕ ಸಂಬೋಧನೆಗಳು ಕಾದಂಬರಿಯುದ್ದಕ್ಕೂ ನಮ್ಮನ್ನು ಆವರಿಸಿ ತಟ್ಟಿದ ಜೀವಭಾವದ ಪ್ರತಿಷ್ಠೆಯ ದಿವ್ಯ ಸಂಬಂಧವಾಗಿದೆ. ನಾಯಿಯನ್ನು ಬಿಟ್ಟಿರಲಾರದ ಹಸಿವಿನ ಮೂಲಕ ಆ ಹೊಲೆಯನನ್ನು ನಾಯಿಗೆ ಬದಲಾಗಿ ತೆಗೆದುಕೊಂಡಿದ್ದ ಪದಾರ್ಥಗಳು ಮುಳ್ಳಿನಂತೆ ಚುಚ್ಚಿವೆ. ಪಾಪ ಪ್ರಜ್ಞೆ ಹುಟ್ಟಿಸಿದ ವೇದನೆ ಆ ಪದಾರ್ಥಗಳನ್ನು ಮತ್ತೆ ಮುಕುಂದಯ್ಯನಿಗೆ ಹಿಂದಿರುಗಿಸುವಂತೆ ಮಾಡಿವೆ. ಯಜಮಾನ್ಯ ಸ್ತರವನ್ನು ವಿರೋಧಿಸಲಾರದ ಆದರೆ ಜೀವಭಾವದ ಪ್ರೀತಿಧಾರೆಯನ್ನು ಅಪವಿತ್ರಗೊಳಿಸಿಕೊಳ್ಳಲಾಗದ ದಿವ್ಯ ಸಂಕಟದಲ್ಲಿ ನೋಯುವ ಆ ಹೊಲೆಯನ ಮನಸ್ಥಿತಿ ಅನನ್ಯವಾದುದು.

ಹಾಗೆಯೇ ಮುಕುಂದಯ್ಯ ಹಾಕಿದ ಮೃಷ್ಟಾನ್ನವನ್ನು ತಿಂದು ಕಟ್ಟು ಬಿಚ್ಚಿದ ಅನಂತರ ಜನಪದ ನಂಬಿಕೆಯನ್ನೇ ಹುಸಿಗೈದು ಗುತ್ತಿ ಹೋದ ದಿಕ್ಕಿಗೆ ಓಟ ಕೀಳುವ ನಾಯಿಯ ನಿಷ್ಠೆ, ಭಾವತುಂಬುವ ಬಗೆಯದು. ಮುಂದೆ ಊಳಿಗಮಾನ್ಯ ವ್ಯವಸ್ಥೆಯ ಬಲವಂತ, ಹಿಂಸೆ, ಕ್ರೌರ್ಯ ಇತ್ಯಾದಿಗಳ ಭಯ ಇಂಥ ನಾಯಿ-ಗುತ್ತಿಯರ ಸಂಬಂಧದ ದುರಂತಕ್ಕೆ ಕಾರಣವಾಯಿತೆನ್ನುವುದನ್ನು ಕಾದಂಬರಿ ವ್ಯಂಜಿಸುತ್ತದೆ.

"ಗುತ್ತಿ ಹೊಲೆಯರ ಜೋಡಿಯಂತೂ ಆದರ್ಶ ಪ್ರಿಯವಾದುದು. ಮನುಷ್ಯ ಮತ್ತು ಪ್ರಾಣಿಗಳಲ್ಲಿ ಈ ಬಗೆಯ ಗೆಳೆತನ ಸಾಧ್ಯವೇ? ಎಂದು ಪ್ರಶ್ನಿಸುವ ಮಟ್ಟಿಗೆ ಗುತ್ತಿ ಮತ್ತು ಹುಲಿಯನ ಸ್ನೇಹ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬೆಳೆದು ಬಂದಿದೆ".[೯]

ಕಾದಂಬರಿಯ ಅಂತ್ಯದಲ್ಲಿ ಬರುವ ಪ್ರಸಂಗವೊಂದು ಇವರಿಬ್ಬರ ಆತ್ಮೀಯತೆಗೆ ನಿದರ್ಶನವಾಗಿದೆ. ನಾಯಿಯನ್ನು ದೋಣಿಯಲ್ಲಿ ಹತ್ತಿಸಿಕೊಳ್ಳಲು ಅಂಬಿಗ ನಿರಾಕರಿಸಿದಾಗ ಹುಲಿಯ ತನ್ನ ಒಡೆಯನನ್ನು ಬಿಟ್ಟಿರಲಾರದೆ ಮಹಾ ಪ್ರವಾಹದಲ್ಲಿ ಈಜಲಾರದೆ, ಕೊನೆಗೂ ಸ್ವಾಮಿಭಕ್ತಿಯ ಮೋಹ ನಾಯಿಯನ್ನು ನೀರಿನಲ್ಲಿಳಿಯಲು ಪ್ರೇರೇಪಿಸುತ್ತದೆ. ಇನ್ನೇನು ಒಡೆಯನನ್ನು ಸೇರಬೇಕೆನ್ನುವಷ್ಟರಲ್ಲಿ ಕೈಬಿಟ್ಟು ಹೋಗಿ ಆ ಮಹಾ ಪ್ರವಾಹದೆದುರು ನಾಯಿಯ ಪ್ರಯತ್ನ ಸಾಧ್ಯವಾಗದೆ ಕೊಚ್ಚಿ ಹೋಗುತ್ತದೆ. ಗುತ್ತಿಯ ಕಣ್ಣಿನಲ್ಲಿ ಧಾರಾಕಾರ ಪ್ರವಾಹ, ತನ್ನ ಕಷ್ಟ-ಸುಖಗಳಲ್ಲಿ ಪಾಲ್ಗೊಂಡು ತನ್ನ ಸೇವೆ ಮಾಡಿದ್ದ ಹುಲಿಯನನ್ನು ನೆನೆದಷ್ಟೂ ಗುತ್ತಿಗೆ ದುಃಖ ಉಮ್ಮಳಿಸಿ ಬರುತ್ತದೆ. ಆದರೆ ಹುಲಿಯ ಆ ಮಹಾಪ್ರವಾಹದ ಕಸಕಡ್ಡಿ, ಕಲ್ಲುಮಣ್ಣಿನಲ್ಲಿ ಒಂದಾಗಿ ಹೋಗಿರುತ್ತದೆ. ಇಲ್ಲಿ ಗುತ್ತಿಯೊಡನೆ ಓದುಗರ ಕಣ್ಣುಗಳೂ ಹನಿಗೂಡದಿರವು.

ಈ ಪ್ರಸಂಗದಿಂದ ಕುವೆಂಪುರವರು ಎಲ್ಲವನ್ನೂ ಒಂದೇ ಬಗೆಯ ತನ್ಮಯತೆಯಿಂದ ಚಿತ್ರಿಸಿದ್ದಾರೆ ಎಂಬುದನ್ನು ಕಾಣಬಹುದು. "ಗುತ್ತಿಯ ನಾಯಿ, 'ಹುಲಿಯ' ಕಾದಂಬರಿಯ ನಾಯಕ ಪಾತ್ರದ ಸ್ಥಾನಕ್ಕೆ ಸ್ಪರ್ಧಿಸುವಂತಿದೆ."[೧೦] ಸಾಮಾನ್ಯವೂ ಇಲ್ಲಿ ಮಾನ್ಯವಾಗಿದೆ ಎಂಬುದಕ್ಕೆ ಹುಲಿಯನ ಪಾತ್ರ ಚಿತ್ರಣ ನಿದರ್ಶನವಾಗಿ ನಿಂತಿದೆ.

## ಐತ- ಪೀಂಚಲು

"ನಾನು ಬಡವಿ
ಆತ ಬಡವ
ಒಲವೆ ನಮ್ಮ ಬದುಕು
ಬಳಸಿಕೊಂಡೆವದನೆ ನಾವು
ಅದಕು ಇದಕು ಎದಕು"೧೧

ಕೆಳವರ್ಗದವರಾದರೂ ಆದರ್ಶಮಯವೂ, ಸಂತೃಪ್ತವೂ ಆದ ಮುಗ್ಧ ದಾಂಪತ್ಯ ಸುಖದ ಪರಾಕಾಷ್ಠತೆಯನ್ನನುಭವಿಸಿದ ವಿಶೇಷ ಜೋಡಿ ಐತ-ಪೀಂಚಲು ಕಾದಂಬರಿಯಲ್ಲಿ ಬರುವ ಕೆಳವರ್ಗಕ್ಕೆ ಸೇರಿದ ಈ ದಂಪತಿಗಳಲ್ಲಿ ಬದುಕಿನ ಬಗೆಗಿರುವ ಉತ್ಸಾಹ ಅನನ್ಯವಾದುದು.

ಬಡತನವಿರುವುದು ಬದುಕಿಗೆ ಹೊರತು ಪ್ರೀತಿಗಲ್ಲ. ಪರಸ್ಪರ ಆತ್ಮೀಯತೆ ಪ್ರೀತಿಯಿದ್ದರೆ ಸಂಸಾರ ಸ್ವರ್ಗಮಯವಾಗಿರುತ್ತದೆ ಎಂಬುದನ್ನು ಬಿಂಬಿಸುವ ಪಾತ್ರಗಳು ಕೆಳವರ್ಗದವರಾಗಿದ್ದರೂ, ಆರ್ಥಿಕವಾಗಿ ಹಿಂದುಳಿದಿದ್ದರೂ ಇವರ ಆದರ್ಶಮಯ ದಾಂಪತ್ಯ ಎಲ್ಲ ಸವಲತ್ತುಗಳನ್ನು ಪಡೆದಿದ್ದ ಮೇಲ್ವರ್ಗದವರನ್ನೂ ನಾಚಿಸುವಂತಿತ್ತು.

'ಮಲೆಗಳಲ್ಲಿ ಮದುಮಗಳು'ವಿನಲ್ಲಿ ಐತ- ಪೀಂಚಲುವಿನ ಅಕೃತಕ ಮೃದು ಮಧುರ ದಾಂಪತ್ಯ ಅತ್ಯಂತ ಆದರ್ಶಮಯವಾಗಿ, ಆತ್ಮೀಯವಾಗಿ ಚಿತ್ರಿತವಾಗಿದೆ. ಅರ್ಧ ನಾರೀಶ್ವರ ದಾಂಪತ್ಯದ ಕಲ್ಪನೆಗೆ ನಿದರ್ಶನವಾಗಿ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾಣುವ ಒಂದು ಮಧುರ ಸಂಸಾರದ ಅಮರ ಚಿತ್ರ ಇದು ಇಂಥ ಒಂದು ಕನಸನ್ನು ಕುವೆಂಪು ಬಹಳ ಮುಂಚೆ ಅಂದರೆ ಸುಮಾರು ೪ ದಶಕಗಳಷ್ಟು ಹಿಂದೆಯೇ ಕಂಡಿದ್ದರು. ಶ್ಮಶಾನ ಕುರುಕ್ಷೇತ್ರಂ ಬರೆದಾಗ

"ಸರ್ವಸಮತ್ವಂ ..........................ಜಗತ್‌ಕಲ್ಯಾಣಂ
ಭೂವೈಕುಂಠಂ ..............ನೋಡದೋ ............
ದೊರದೊಳ್ ಬಹುದೂರದೊಳ್ ಕಾಲಗರ್ಭದೊಳ್ ......
ಸಾಧಾರಣ ಮಾನವ ಸಂಸಾರಂ ........ಸತಿಪತಿಗಳ ಶೃಂಗಾರಂ .............."೧೨

ಐತ-ಪೀಂಚಲುವಿನ ಪ್ರೇಮಲೋಕವೇ ಬೇರೆ. ಅವರು ಪ್ರೇಮವನ್ನೇ ಬಟ್ಟೆಯಾಗಿ ಧರಿಸಬಲ್ಲರು, ಊಟವಾಗಿ ಉಣ್ಣಬಲ್ಲರು, ಗಾಳಿಯಾಗಿ ಉಸಿರಾಡಬಲ್ಲರು, ನೀರಾಗಿ ಕುಡಿಯಬಲ್ಲರು, ಸೌಂದರ್ಯವಾಗಿ ಸವಿಯಬಲ್ಲರು, ದೇಹ ಸುಖವನ್ನಾಗಿ ಅನುಭವಿಸಬಲ್ಲರು. ನಿರ್ಮಲವಾದ ಪ್ರೇಮಮಯವಾದ ಬದುಕು ಅವರ ಪ್ರೇಮ ಕುಸುಮಕ್ಕೆ ಯಾವುದೇ ಅಡ್ಡಿ ಆತಂಕಗಳೂ ಇಲ್ಲ. ಆದರೆ ಇವರ ಗಾಢ ಪ್ರೇಮವನ್ನು ಕಂಡು ಸಹಿಸದ ಕೆಲವರು ಅಸೂಯೆಯ ಮಾತುಗಳಿಂದ ಒಂದು ಕ್ಷಣ ಐತನ ಮನಸ್ಸು ವಿಚಲಿತವಾದರೂ, ತಕ್ಷಣವೇ ಆ ಅನುಮಾನಗಳು ಮಾಯವಾಗಿ ಪ್ರೇಮಾರಾಧಕನಾಗುತ್ತಾನೆ.

ಪೀಂಚಲು ಐತ ರತಿ ಮನ್ಮಥರೇನಲ್ಲ. ಶ್ರೀಮಂತರೂ ಅಲ್ಲ, ಸಾಲದಕ್ಕೆ ಉನ್ನತ ವರ್ಗದವರೂ ಅಲ್ಲ, ಹೀಗೆ ಬದುಕಿನ ಎಲ್ಲಾ ಸ್ತರಗಳಲ್ಲಿಯೂ ಕೆಳವರ್ಗದವರೇ ಆದರೂ ಪ್ರೇಮಿಗಳಾಗಿ ಇಡೀ ಮಲೆನಾಡು ಸೀಮೆಗೆ ಶ್ರೀಮಂತರು. ಇವರ ಸಂದರ್ಭದಲ್ಲಿ ಲೇಖಕರು ಮನಬಿಚ್ಚಿ ವರ್ಣಿಸುತ್ತಾರೆ. ನಮ್ಮ ಮುಂದೆ ನಡೆಯುವಂತೆ ಸನ್ನಿವೇಶವನ್ನು ನಿರ್ಮಾಣ ಮಾಡುತ್ತಾರೆ. ಲೇಖಕರ ಪ್ರಗತಿಪರ ಧೋರಣೆ ಇಲ್ಲಿ ಗಂಟಿಕ್ಕಿ ಹರಡಿವೆ. ದಂಪತಿಗಳಿಬ್ಬರೂ ಸಹೃದಯಿಗಳಾದರೆ ಅವರು ಆರ್ಥಿಕವಾಗಿ ಶ್ರೀಮಂತರಲ್ಲದಿದ್ದರೂ ಸಾಂಸಾರಿಕ ಜೀವನ ಯಾವುದೇ ಕೀಟಲೆಗಳಿಲ್ಲದೆ ಸುಸಂಗತವಾಗಿ ಸಾಗುತ್ತದೆ ಎಂಬುದಕ್ಕೆ ಐತ, ಪೀಂಚಲು ಮಾದರಿಗಳಾಗಿ ನಿಲ್ಲುತ್ತಾರೆ. ಇವರಿಬ್ಬರೂ ವ್ಯವಸ್ಥೆಯೊಳಗಿದ್ದುಕೊಂಡೇ ತಮ್ಮ ಅಸ್ತಿತ್ವವನ್ನು ರೂಪಿಸಿಕೊಂಡಿರುವುದು ಕಂಡು ಬರುತ್ತದೆ.

ಐತ-ಪೀಂಚಲುವಿನದು ಪರೋಪಕಾರ ಬುದ್ಧಿಯ ಮತ್ತು ಪರಸ್ಪರ ಅನುರಾಗದ ಅಮೃತೋದಯ ಸಂಸಾರ, ಐತ, ಪೀಂಚಲುವಿನ ರೂಪ, ಯೌವನಕ್ಕೆ ಮಾರುಹೋಗಿದ್ದ. ಪೀಂಚಲುವಿಗೂ ಪತಿಯ ಬಗೆಗೆ ಅಪಾರ ಪ್ರೀತಿ, ಮುಕುಂದಯ್ಯ ಚಿನ್ನಮ್ಮರನ್ನು ಕಂಡರೆ ಗೌರವ, ಅಕ್ಕರೆ, ಅವರಿಬ್ಬರ ಪ್ರಣಯ ಫಲಿಸಲು ಅಂತಃಕರಣಪೂರ್ವಕವಾಗಿ ಶ್ರಮಿಸುತ್ತಾರೆ. ಪೀಂಚಲು ಮುಕುಂದಯ್ಯನ ರಹಸ್ಯ ಕಾರ್ಯಗಳನ್ನೆಲ್ಲ ಯಶಸ್ವಿಯಾಗಿ ಬುದ್ಧಿವಂತಿಕೆಯಿಂದ ನಿರ್ವಹಿಸುತ್ತಾ ಸಹಾಯಕಳಾಗುತ್ತಾಳೆ. ಗರ್ಭಿಣಿಯಾಗಿದ್ದ ಪೀಂಚಲು ಚಿನ್ನಮ್ಮನ ಇಷ್ಟವಿಲ್ಲದ ಮದುವೆಯ ದಿನ ಅವಳನ್ನು ಮದುವೆಯ ನರಕದಿಂದ ಬಿಡುಗಡೆ ಮಾಡಲು ವಹಿಸಿದ ಶ್ರಮ ಅಪಾರವಾದುದು. ಐತ, ಪೀಂಚಲುವಿನ ಪರಸ್ಪರ ಪ್ರೇಮಭಾವನೆ ಶಕ್ತಿಯುತವಾಗಿ ಮುಕುಂದಯ್ಯ ಚಿನ್ನಮ್ಮರ ಪ್ರೇಮಬಂಧನಕ್ಕೆ ಸಹಾಯ ಮಾಡುತ್ತದೆ.

ಒಟ್ಟಾರೆ ಐತ- ಪೀಂಚಲು ಹೆಚ್ಚಿನ ಗೊಂದಲವಿಲ್ಲದ ಕೌಟುಂಬಿಕ ಆವರಣವನ್ನು ಸೃಷ್ಟಿಸಿಕೊಂಡಿದ್ದಾರೆ. ಸಾಮಾಜಿಕ ಮಟ್ಟದಲ್ಲಿ ಸರಳ ದಾಂಪತ್ಯ ಜೀವನವನ್ನು ಸಾಗಿಸುವ ಐತ,ಪೀಂಚಲುವಿನ ಬಗ್ಗೆ ಸಂಶಯ ತಾಳುವಂಥ ಘಟನೆಗಳು ನಡೆದರೂ, ಅವನು ಹೆಂಡತಿಯ ಮೇಲೆ ರೇಗಲಿಲ್ಲ. ಆದರೆ ಗುತ್ತಿಯಂತೆ ನಿರ್ಲಿಪ್ತನಾಗಿಯೂ ಇರಲಿಲ್ಲ. ಪೀಂಚಲುವನ್ನು ಪರೀಕ್ಷಿಸುತ್ತಾನೆ. ಆದರೆ ಪೀಂಚಲು, ಅವರ ಜಾತಿ ಪದ್ಧತಿಯಂತೆ ಐತನೊಬ್ಬನನ್ನೇ ಗಂಡನೆಂದು ನಂಬಿಯೂ ಇರಬೇಕಾಗಿರಲಿಲ್ಲ. ತನ್ನ ಗಂಡನ ಸಂಬಂಧವಾದ ಅವಳ ನಡವಳಿಕೆಯನ್ನು ಪಾತಿವ್ರತ್ಯ ಎಂದು ಕರೆಯುವಂತೆಯೂ ಇರಲಿಲ್ಲ. ಏಕೆಂದರೆ ಅದಕ್ಕೆ ಸಾಮಾಜಿಕ ನೀತಿಯ ಭೀತಿಯಾಗಲೀ, ಆದರ್ಶ ಸಾಧನೆಯ ಸಾಣೆಯಾಗಲೀ ಇರಲಿಲ್ಲ. ಅದು ತೀರ ನೈಸರ್ಗಿಕವಾಗಿತ್ತು.

ಪೀಂಚಲುವಿಗೆ ಮದುವೆಗೆ ಮೊದಲಿನ ಮುಕುಂದಯ್ಯನ ಬಗೆಗಿನ ಅಭಿಮಾನ ಇಂದಿಗೂ ಅಕ್ಷತವಾಗಿಯೇ ಉಳಿದಿತ್ತು. "ಐತ ಅಪೇಕ್ಷಿಸಿದ್ದನ್ನು ಮುಕುಂದಯ್ಯ ಬಯಸಿದ್ದರೆ ಅವಳು ಇಲ್ಲ ಎನ್ನುವ ಸ್ಥಿತಿಯಲ್ಲಿರಲಿಲ್ಲ. ಒಲ್ಲೆ ಎನ್ನುತ್ತಿರಲಿಲ್ಲ. ತನಗಿಂತಲೂ ಮಹತ್ತಾದುದಕ್ಕೆ ತನ್ನನ್ನು ಅರ್ಪಿಸಿಕೊಳ್ಳಲು ಅವಳು ಹಿಂಜರಿಯುತ್ತಿರಲಿಲ್ಲ. ತಾನು ಬಹು ಪೂರ್ವದಿಂದ ಮೆಚ್ಚಿಕೊಂಡೇ ಬಂದಿರುವ ತನ್ನ ಒಡೆಯನಿಗೆ ತೋರುವ ಗೌರವವೆಂದೂ ವಿಧೇಯತೆಯ ಅಂಗವೆಂದೂ ತನ್ನನ್ನು ಸಮರ್ಪಣ ಭಾವದಿಂದಲೇ ಸಂತೋಷವಾಗಿಯೇ ಪಾಪಭಯ ಲೇಶವಿಲ್ಲದೆ ಆತ್ಮನೈವೇದ್ಯ ರೂಪದಿಂದಲೇ ಒಪ್ಪಿಸಿಕೊಂಡು ಬಿಡುತ್ತಿದ್ದಳು"೧೩. ಮುಕುಂದಯ್ಯನಿಗೆ ತನ್ನನ್ನು ಕೊಟ್ಟುಕೊಳ್ಳುವುದರಿಂದ ಗಂಡನಿಗೆ ವಂಚನೆ ಮಾಡಿದಂತಾಗುವುದಿಲ್ಲ ಎಂಬುದನ್ನು ಧ್ವನಿಸುತ್ತಾಳೆ.

ಆದರೆ ಇದು ಕೆಳವರ್ಗಕ್ಕೆ ಮಾತ್ರ ಸೀಮಿತವಾದ ಆಶಯ ಎಂಬುದನ್ನು ಗಮನಿಸಬೇಕು. ಆದರೆ ಪೀಂಚಲುವಿನ ಆಶಯ ಸಾಧ್ಯವಾಗಿದ್ದರೆ ಗಂಡ, ಹೆಂಡಿರು ಸಂಘರ್ಷಕ್ಕೆ ಒಳಗಾಗುತ್ತಿದ್ದರೆಂಬುದನ್ನು ಚೀಂಕ್ರನ ಅಸೂಯೆಯ ಮಾತು ಕೇಳಿ ಅನುಮಾನ ಪಡುವ ಐತನ ನಡವಳಿಕೆ ಸೂಚಿಸುತ್ತದೆ.

ಇದರಿಂದಾಗಿ ಪೀಂಚಲು ಭಾವಿಸಿರುವಂತೆ ಮುಕುಂದಯ್ಯನ ಲೈಂಗಿಕ ಸಂಬಂಧ ಐತನ ಕೌಟುಂಬಿಕ ನೆಲೆಯ ವೈಯಕ್ತಿಕ ಆಶಯವನ್ನು ಗಮನಿಸಿದರೆ, ಅದು ಸ್ಫೋಟಿಸುತ್ತಿತ್ತು ಎಂಬುದರಲ್ಲಿ ಅನುಮಾನವಿಲ್ಲ. ಮುಕುಂದಯ್ಯ ಮೇಲುವರ್ಗದ ಸಂಭಾವಿತ ವ್ಯಕ್ತಿಯಾದ್ದರಿಂದ ಅಥವಾ ಅಂಥವರೊಡನೆ ತಾನು ಇಟ್ಟುಕೊಳ್ಳುವ ಸಂಬಂಧವನ್ನು ಸಮಾಜ ಅಷ್ಟೇನೂ ತಿರಸ್ಕಾರದಿಂದ ನೋಡುವುದಿಲ್ಲವಾದ್ದರಿಂದ ಪೀಂಚಲುವಿನಲ್ಲಿ ಧನ್ಯತಾ ಭಾವವಿದೆ. ಆದರೆ ಐತ, ಹೆಣ್ಣು-ಗಂಡಿನ ನಡುವಿರುವ ಕೌಟುಂಬಿಕವಲ್ಲದ ಲೈಂಗಿಕ ಸಂಬಂಧವನ್ನು, ವೈಯಕ್ತಿಕ ಸ್ವಭಾವವು ಅದನ್ನು ನಂಬಿರುವ ಇನ್ನೊಂದು ಸ್ವಭಾವಕ್ಕೆ ಮಾಡುವ ದ್ರೋಹವಾಗಿ ಮತ್ತು ಕುಟುಂಬವು ತನ್ನ ಸ್ಥಿರತೆಯನ್ನು ಕಳೆದುಕೊಳ್ಳಬಹುದಾದ ನೆಲೆಯಲ್ಲಿ ಯೋಚಿಸುತ್ತಾನೆ.

"ಐತ-ಪೀಂಚಲು , ಮುಕುಂದಯ್ಯ ಹೆಚ್ಚು ಕಡಿಮೆ ಸಮ ವಯಸ್ಸಿನವರು ರೂಪಸಿಯಾದ ಪೀಂಚಲುವಿನ ಮೇಲೆ ಮುಕುಂದಯ್ಯ ಎಂದೂ ಆಸೆ ಪಟ್ಟವನಲ್ಲ. ಅವನಿಗೆ ಆ ತರುಣ ದಂಪತಿಗಳು ಪ್ರಾಚೀನ ಕಾಲದಲ್ಲಿ ಪೌರಾಣಿಕ ಯುಗದಲ್ಲಿ ದಂಡಕಾರುಣ್ಯಕ್ಕೋ, ನೈಮಿಶಾರಣ್ಯಕ್ಕೋ ಕಾರ್ಯಾರ್ಥವಾಗಿ ಅವತರಿಸಿ ಅಲೆಯುತ್ತಿರಬಹುದಾದ ಬಿಲ್ಲ ವೇಷದ ಶಿವ-ಶಿವಾಣಿಯರಂತೆ ಕಾಣುತ್ತಿದ್ದರು."೧೪

ಐತ ಪೀಂಚಲು ಇವರಿಗೆ ಕಾದಂಬರಿಯಲ್ಲಿರುವ ವಿಶಿಷ್ಟ ಸ್ಥಾನದಿಂದಾಗಿ ಮುಕುಂದಯ್ಯನ ಪ್ರತಿಕ್ರಿಯೆ ಕೇವಲ ವೈಯಕ್ತಿಕವೇ, ಕ್ಷಣಿಕವೇ ಎಂಬ ಪ್ರಶ್ನೆ ಏಳುತ್ತದೆ. ಐತ-ಪೀಂಚಲು ಮುಕುಂದಯ್ಯ ಅವರಲ್ಲಿ ಕಾಣುವ ಸಾಂಕೇತಿಕತೆಯನ್ನು ಹೊರಬಲ್ಲ ಪಾತ್ರಗಳಲ್ಲ. ಆದರೂ ಕಾದಂಬರಿಯ ಒಟ್ಟರ್ಥದ ದೃಷ್ಟಿಯಿಂದ ಈ ವ್ಯಾಖ್ಯಾನವನ್ನು ಮುಕುಂದಯ್ಯನ ಮನೋಭಾವದ ಇತಿಮಿತಿಗಳನ್ನು ತೋರಿಸಲು ಉಪಯೋಗಿಸಿರುವಂತಿಲ್ಲ.

"ಐತ, ಪೀಂಚಲು, ಗುತ್ತಿ-ತಿಮ್ಮಿಯರ ಜೀವನದಲ್ಲಿರುವ ಮುಖ್ಯ ಹೋಲಿಕೆ ಅವರಿಗೂ ನೈಸರ್ಗಿಕ ಪ್ರವೃತ್ತಿಗಳಿಗೂ ಇರುವ ನೇರ ಸಂಬಂಧ. ಈ ಎರಡೂ ಸಂಸಾರಗಳಲ್ಲೂ ವೈಯಕ್ತಿಕ ಸಂಬಂಧದ ಮಟ್ಟದಲ್ಲಿ ಹೆಚ್ಚು ಸಮಸ್ಯೆಗಳಿಲ್ಲ. ಐತ, ಪೀಂಚಲು ಎದುರಿಸಬೇಕಾಗಿ ಬರುವ ಮುಖ್ಯ ಸಮಸ್ಯೆ, ಪೀಂಚಲು ಮುಕುಂದಯ್ಯನೊಡನೆ ಕಾಮಸಂಬಂಧ ಹೊಂದಿರಬಹುದೆಂದು ಶಂಕಿಸುವುದು ಇದೇ ರೀತಿ ಗುತ್ತಿ, ತಿಮ್ಮಿಯರು ಎದುರಿಸಬೇಕಾಗುವ ಸಮಸ್ಯೆಗಳು ತಮಗಿಂತ ಮೇಲ್ಮಟ್ಟದಲ್ಲಿರುವವರ ಇಷ್ಟಕ್ಕೆ ವಿರುದ್ಧವಾಗಿ ಆಯ್ಕೆಗಳನ್ನು ಮಾಡುವುದರಿಂದ ಹುಟ್ಟುತ್ತವೆ. ಇದರರ್ಥ ಅವರಿಗೆ ನೇರವಾಗಿ ಸಂಬಂಧಿಸಿದ ಸಾಮಾಜಿಕ ವ್ಯವಸ್ಥೆಯ ಕಲ್ಪನೆಗಳು ಅವರ ವೈಯಕ್ತಿಕ ಜೀವನದ ಮೇಲೆ ಹೆಚ್ಚು ಪ್ರಭಾವ ಬೀರಿಲ್ಲ ಎನ್ನಬಹುದು. ಹೀಗಾದಲ್ಲಿ ವೈಯಕ್ತಿಕ ಆಯ್ಕೆಗಳಿಂದ ಹುಟ್ಟುವ ನೈತಿಕ ಸಮಸ್ಯೆಗಳನ್ನು ಎದುರಿಸುವವರು ಐತ, ಪೀಂಚಲು ಅವರಿಗಿಂತ ಮೇಲ್ಮಟ್ಟದವರು ಎಂದಾಗುತ್ತದೆ."೧೫

ಒಟ್ಟಾರೆ ಐತ-ಪೀಂಚಲು ಪಾತ್ರಗಳ ವಿಶಿಷ್ಟತೆಯನ್ನು ಅವುಗಳಿಗಿರುವ ಅಂತಃಕರಣದ ಮೂಲಕ ಕಾಣಹುದು. ಸಮ-ವಯಸ್ಸಿನವರೇ ಆದ, ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಕ್ಕಿ ಪರಿತಪಿಸುತ್ತಿರುವ ಮುಗ್ಧ ಪ್ರಣಯಿಗಳಾದ ಮುಕುಂದಯ್ಯ-ಚಿನ್ನಮ್ಮ, ಗುತ್ತಿ-ತಿಮ್ಮಿಯರನ್ನು ಒಂದುಗೂಡಿಸುವಲ್ಲಿ ಇವರು ವಹಿಸುವ ಪಾತ್ರ ಪ್ರಶಂಸಾರ್ಹ.

## ಅಕ್ಕಣಿ - ಪಿಜಣ :

ಐತ- ಪೀಂಚಲು ಇವರ ಜೀವನಕ್ಕೆ ನೇರ ವೈದೃಶ್ಯದಂತಿರುವುದು ಅಕ್ಕಣಿ-ಪಿಜಣರ ಜೀವನ. ಅಕ್ಕಣಿಯ ಕಷ್ಟಗಳಿಗೆ ಮತ್ತು ಆಕೆ ಚೀಂಕ್ರನಿಗೆ ದೇಹ ಒಪ್ಪಿಸಿಕೊಳ್ಳವುದಕ್ಕೆ ಕಾರಣ ಸ್ಪಷ್ಟವಾಗಿದೆ. "ಆಕೆ ಸೇರೆಗಾರನಿಗೆ ಮನಸ್ಸು ಸೋತು ಒಡಲನ್ನು ಒಪ್ಪಿಸಿಲಿಲ್ಲ". ಆಕೆ ಕಾಲು ಜಾರುವುದಕ್ಕೆ ಕಾರಣಗಳು, ಸಮಯ, ಸನ್ನಿವೇಶ, ದಾಕ್ಷಿಣ್ಯ, ಆದರೆ ಆಕೆಯ ಜೀವನವನ್ನು ಕೇವಲ ಒಂದು ವೈಯಕ್ತಿಕ ಜೀವನವೆಂದು ಪರಿಗಣಿಸದೆ ಕಾದಂಬರಿಯ ವಸ್ತುವಿನ ಬೆಳವಣಿಗೆಗೆ ಸಹಾಯ ಮಾಡುವ ಘಟನೆ ಎಂದು ಪರಿಗಣಿಸಿದರೆ ಕೆಲವು ಮುಖ್ಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಅಕ್ಕಣಿ ಕಾಲು ಜಾರುವುದಕ್ಕೆ ಮುಖ್ಯ ಕಾರಣ ಆಕೆಯ ಗಂಡ ಪಿಜಣ. ಹೆಣ್ಣಿನ ಜೀವನದಲ್ಲಿ ಗಂಡು ವಹಿಸಬೇಕಾದ ಪಾತ್ರವನ್ನು ವಹಿಸುವ ಸ್ಥಿತಿಯಲ್ಲಿಲ್ಲದಿದ್ದುದು ಇದಕ್ಕೆ ಕಾರಣ.

ತನಗೆ ಸಿಗಬೇಕಾದ ದೇಹಸುಖ ಸಿಗದಿದ್ದಾಗ ಚೀಂಕ್ರನಂಥವರಿಂದ ಅದನ್ನು ಪಡೆಯಲು ಹಿಂಜರಿಯುವುದಿಲ್ಲ. ಇಲ್ಲಿ ಲೇಖಕರು ಮಾನವ ಸಹಜವಾದ ಭಾವನೆಗಳನ್ನು, ಬಯಕೆಗಳನ್ನು ಪ್ರತಿಯೊಬ್ಬರೂ ಹೌದು ಎನ್ನುವಂತೆ ಈ ಸಂದರ್ಭದಲ್ಲಿ ಕಡೆದು ನಿಲ್ಲಿಸಿದ್ದಾರೆ. ಇಲ್ಲಿ ಅಕ್ಕಣಿಯನ್ನು ಅಪರಾಧಿ ನೆಲೆಯಲ್ಲಿ ನೋಡಲಾಗದು. ಚೀಂಕ್ರನ ಜೊತೆ ಅಕ್ರಮ ಸಂಬಂಧ ಹೊಂದಿದ್ದರೂ ಅಕ್ಕಣಿಗೆ ಪಾಪದ ಭೀತಿಯಾಗಲೀ, ನೈತಿಕ ಭಯವಾಗಲೀ ಇಲ್ಲ. ಗಂಡನ ಬಗೆಗೆ ಆಕೆಗೆ ಅಪಾರ ಪ್ರೀತಿ-ಗೌರವಗಳಿದ್ದೂ ಚೀಂಕ್ರನ ಸಂಬಂಧವಾದ ಘಟನೆ ಮಾನಸಿಕ ತೊಳಲಾಟಕ್ಕೆ ಕಾರಣವಾಗುವುದಿಲ್ಲ ಎಂದರೆ ಲೈಂಗಿಕ ವಿಷಯ ಆ ಸಮಾಜದಲ್ಲಿ ಎಷ್ಟು ನೈಸರ್ಗಿಕವಾದುದೆಂಬುದರ ಅರಿವಾಗುತ್ತದೆ.

ಮಾನವ ತಾನು ಬದುಕುವ ಆವರಣದಲ್ಲಿ ಎದುರಿಸುವ ಪ್ರಕ್ರಿಯೆಗಳ ಮೂಲಕ ಸಾಂಸ್ಕೃತಿಕ ಘಟನೆ ಪ್ರತ್ಯುತ್ತರ ನಿರ್ಮಾಣಗೊಳ್ಳುವುದರಿಂದ ಆ ಬಗೆಯ ಘಟನೆಗಳನ್ನು ಅಧ್ಯಯನ ಮಾಡಲು ಘಟನೆಗಳ ಹಿನ್ನೆಲೆಯನ್ನು ಶೋಧಿಸಬೇಕಾಗುತ್ತದೆ. ಒಂದು ಸಂದರ್ಭದಲ್ಲಿ ಕೌಟುಂಬಿಕ ಸ್ತರದಿಂದ ಆಚೆ ಸರಿದ ಅಕ್ಕಣಿ ಅದೇ ದಾರಿಯಲ್ಲಿ ಬದುಕುವ ಮಾರ್ಗವಾಗಿ ದುಡಿಸಿಕೊಳ್ಳುತ್ತಾಳೆ. ಆದರೆ ದೇಯಿಯ (ಚೀಂಕ್ರನ ಪತ್ನಿ) ಅಸ್ತಿತ್ವ ಲಯವಾದ ಮೇಲೆ ಅವಳು ಪೋಷಕಳಾಗುತ್ತಾಳೆ. ಈ ಆಶಯ ಅಕ್ಕಣಿಯ ಬದುಕಿನ ಚಲನಶೀಲತೆಯನ್ನು ಧ್ವನಿಸುತ್ತದೆ. ಅಕ್ಕಣಿ ಒಂದರಲ್ಲಿ ಕಳೆದುಕೊಂಡದ್ದನ್ನು ಮತ್ತೊಂದರಲ್ಲಿ ಪಡೆಯಲು ಯತ್ನಿಸುತ್ತಾಳೆ. ಅಂದರೆ ತನ್ನ ಅಸ್ತಿತ್ವದ ಮೂಲಕ ತನ್ನ ಅಸ್ತಿತ್ವಕ್ಕೆ ಬೆಲೆ ತಂದುಕೊಳ್ಳುವ ಸೃಜನಶೀಲತೆಯಲ್ಲಿ ಮುನ್ನಡೆಯುತ್ತಾಳೆ. ಈ ಹಿನ್ನೆಲೆಯಲ್ಲಿ ಅಕ್ಕಣಿಯ ವ್ಯಕ್ತಿತ್ವ ಅಧ್ಯಯನ ಯೋಗ್ಯ.

**ಸೇಸಿ:**

ಕಾದಂಬರಿಯ ಹಲವು ಸ್ತ್ರೀ ಪಾತ್ರಗಳಲ್ಲಿ ಸೇಸಿಯ ವ್ಯಕ್ತಿತ್ವ ವಿಶಿಷ್ಟವಾದದ್ದು. ತಿಮ್ಮಿಯ ತಾಯಿ, ದೊಡ್ಡ ಬೀರನ ಹೆಂಡತಿ ಒಡೆಯರ ಜೀತಕ್ಕಾಗಿಯೇ ವೈಯಕ್ತಿಕ ಆಯ್ಕೆಯಾದ ಮದುವೆಗಳೂ ಬಲಿಯಾಗುತ್ತಿರುವ ವಿಷಾದದ ಅರಿವು ಅವಳಿಗಿದೆ. ಹಾಗಾಗಿಯೇ ಗುತ್ತಿಯ ಜೊತೆಗೆ ಮಗಳು ತಿಮ್ಮಿ ಓಡಿಹೋಗಲು ನೆರವಾಗಿ ಒಡೆಯರ ಆಜ್ಞೆಯನ್ನು ಧಿಕ್ಕರಿಸುತ್ತಾಳೆ. ಹಾಗೆಯೇ ತನ್ನ ಮಗ ಕಲ್ಲಯ್ಯಗೌಡರಿಂದ ಶಿಕ್ಷೆಗೆ ಒಳಗಾದಾಗ ಮಗನನ್ನು ರಕ್ಷಿಸಲು ಮುಂದಾಗುವ ಧೈರ್ಯ ತೋರುತ್ತಾಳೆ.

ಸಣ್ಣಬೀರನನ್ನು ಕಟ್ಟಿಸಿ ಹೊಡೆಯುವಾಗ, ತಾಯಿ ಮಗನ ಜೀವ ಕಾಪಾಡುವ ತನ್ನ ಎಲ್ಲ ವಿಧವಾದ ಸಾಮಾಜಿಕ ದಿಗ್ಬಂಧನವನ್ನು ಮೀರಿನಿಂತು ಮಾತೃತ್ವ ಶಕ್ತಿಯ ಪ್ರತೀಕವಾಗಿ ಅದನ್ನು ವಿರೋಧಿಸುವ ಬಗೆಯಲ್ಲಿ ಸಾಂಕೇತಿಕತೆಯಿರುವುದನ್ನು ಕುವೆಂಪು ವ್ಯಾಖ್ಯಾನಿಸುತ್ತಾರೆ. ಮಗನಿಗೆ ಕೊಡುತ್ತಿದ್ದ ಚಿತ್ರಹಿಂಸೆಯನ್ನು ನೋಡಿ ತಾಳಲಾರದೆ ಉನ್ಮತ್ತಳಾಗಿ ನುಗ್ಗುವ ಸೇಸಿಯಲ್ಲಿ ನೈಜ ತಾಯ್ತನದ ಪ್ರವೃತ್ತಿ ತನ್ನ ಅಧಿಕಾರ ಸ್ಥಾಪಿಸುತ್ತದೆ. "ಹೊಲೆಯಳಾದರೂ, ಬಡವಳಾದರೂ, ಯಾವ ವಿಧವಾದ ವ್ಯಕ್ತಿತ್ವ ವಿಶೇಷವೂ ಲವಲೇಶವೂ ಇಲ್ಲದವಳಾದರೂ, ಸಂಕಟತಪ್ತ ತಾಯ್ತನ ಎಂಥ ಅಲ್ಪ ಸ್ತ್ರೀಯನ್ನಾದರೂ ಭೂಮಮಟ್ಟಕ್ಕೇರಿಸಿ ಬಿಡುತ್ತದೆಯೋ ಏನೋ ಎಂಬಂತೆ ಅವಳ ಮಾತೃ ದುಃಖ ಜನ್ಯ ಕ್ರೋಧದ ಸಾನಿಧ್ಯಭೀಷಣೆಗೆ ಕ್ಷಣ ಮಾತ್ರ ಭೀತಚೇತಸನಾದನು ಇಜಾರದ ಸಾಬಿ! ಗೌಡರ ಆಜ್ಞೆಯನ್ನು ಮರೆತು, ಸೇಸಿಯ ಮಾತಿಲ್ಲದೆ ಅಣತಿಗೆ ಒಳಗಾದವನಂತೆ, ಬೇಗ ಬೇಗನೆ ಸಣ್ಣ ಬೀರನನ್ನು ಬಿಗಿದಿದ್ದ ಹಗ್ಗದ ಕಟ್ಟುಗಳನ್ನೆಲ್ಲ ಬಿಚ್ಚಿ ಹಾಕಿದನು."೧೬

ಗೌಡರನ್ನು ಕಂಡರೆ ನೂರು ಮಾರು ದೂರದಲ್ಲಿಯೇ ಕುಗ್ಗಿ ಹೆದರಿ ಹುದುಗಿಕೊಳ್ಳುವ ಸ್ವಭಾವದ ಸಹಜ ಭೀರು, ಆ ಹೊಲತಿ ಈಗ ಗೌಡರಿಗೆ ಎದುರಾಗಿ ಕೈಮುಗಿದು ಗಂಡ ಮಗನ ಬಿಡುಗಡೆಗಾಗಿ ಗೌಡರನ್ನು ಬೇಡುವ ದಿಟ್ಟತನ ತೋರುತ್ತಾಳೆ. ಇದೊಂದು ಅತೀತ ಅಸಾಧಾರಣ ಆವೇಶದ ರೀತಿಯ ಶಕ್ತಿಯ ಪ್ರಕಟಣೆಯ ಅಂಶವಾಗಿದ್ದು, ರಕ್ಷಕಳಾದ ಮಾತೆಯ ಆಂಶಿಕ ಪ್ರತೀಕತೆಯನ್ನು ಇಲ್ಲಿ ಗುರುತಿಸಬಹುದು. ಇಲ್ಲಿ ಬರುವ ಪ್ರತಿ ಪದವೂ ವಿಷಯವನ್ನು ಕಣ್ಣಿಗೆ ಕಟ್ಟಿಸುತ್ತದೆ. ಸೇಸಿಯಲ್ಲಿ ಮಾತೃ ಸಹಜ ದುಃಖವಿದೆ. ಕ್ರೋಧವಿದೆ. ಆ ಕ್ರೋಧಕ್ಕೆ ಇಡೀ ವಾತಾವರಣವೇ ತಲ್ಲಣಿಸುತ್ತದೆ. "ಮಾತೃ ಶಾಪ ಏನು ಬೇಕಾದರೂ ಮಾಡಬಹುದೆಂಬ ಭೀತಿಯಿದೆ.೧೭ ಇಲ್ಲಿ ಭೂಮಾಲೀಕ ಸಂಸ್ಕೃತಿಯ ವಿರುದ್ಧ ಹೊಲೆಮಾದಿಗರು ಬಂಡೇಳುವುದು ಬಹುತೇಕ ಕಷ್ಟಕರ ಎಂಬುದಕ್ಕೆ ಈ ಪ್ರಸಂಗವೊಂದು ನಿದರ್ಶನವಾಗಿದೆ.

ಸೇಸಿಯಲ್ಲಿ ತಾಯ್ತನದ ತುತ್ತತುದಿಯನ್ನು ಕಾಣುತ್ತೇವೆ. ಅವಳ ವ್ಯಕ್ತಿತ್ವ ಮಮತೆಯಿಂದ ಚಿತ್ರಿತವಾಗಿದೆ. ಜೀತದಾಳಾದರೂ ಅವಳಿಗೂ ವ್ಯಕ್ತಿತ್ವವಿದೆ. ಸ್ವಂತ ಮನಸ್ಸಿದೆ ಎಂಬುದನ್ನು ಕಾದಂಬರಿಕಾರರು ಮನೋಜ್ಞವಾಗಿ ಚಿತ್ರಿಸಿದ್ದಾರೆ.

**ಸಣ್ಣಬೀರ :**

ಕಲ್ಲೇಗೌಡರ ಬಳಿ ಜೀತದಾಳಾಗಿದ್ದ ಸಣ್ಣಬೀರನದು ದಲಿತರು ಎದುರಿಸುತ್ತಿದ್ದ ಸಮಸ್ಯೆಗಳನ್ನು ಬಿಂಬಿಸುವ ಮತ್ತೊಂದು ಪಾತ್ರ. ಸಣ್ಣಬೀರನ ತಂಗಿ ತಿಮ್ಮಿ ಗುತ್ತಿಯೊಡನೆ ಓಡಿಹೋದ ನಂತರ ತಮ್ಮ ಗದ್ದೆಯಲ್ಲಿ ದುಡಿಯುವ ಜೀತದಾಳು ಕಡಿಮೆಯಾದುದಕ್ಕೆ ಕಲ್ಲೇಗೌಡರು ಈತನನ್ನು ಎಳೆದು

ತರಿಸುತ್ತಾರೆ. "ಇಜಾರದ ಸಾಬು ತನ್ನ ಕೈಯಿಂದ ಉಗ್ರಸನ್ನೆ ಮಾಡಿ ತಲೆಯಾಡಿಸಿ ಕರೆದೊಡನೆಯೆ ಗಾಡಿಯ ನೊಗಕ್ಕೆ ಹೆಗಲು ಕೊಟ್ಟೂ ಕೊಟ್ಟು ಅಭ್ಯಾಸವಿದ್ದ ಗಾಡಿಎತ್ತು, ಗಾಡಿ ಹೊಡೆಯುವವನು ಮೂಕಿಗೆ ಕೈಹಾಕಿ ಎತ್ತಿ ಲೊಚಗುಟ್ಟೊದೊಡನೆಯೆ ನೊಗಕ್ಕೆ ವಿಧೇಯತೆಯಿಂದ ಹೆಗಲು ಕೊಡುವಂತೆ, ಸಣ್ಣಬೀರ ನಡುನಡುಗುತ್ತಲೇ, ನಾಲಿಗೆ ಬಿದ್ದುಹೋಗಿ ಮಾತು ಸತ್ತವನಂತೆ, ಮೂಕಪಶುವಿನಂತೆ, ಒಮ್ಮೆ ಕೆರಳಿ ಕುಳಿತಿದ್ದ ಗೌಡರನ್ನೂ ಒಮ್ಮೆ ದುಃಖದೀನನಾಗಿ ಪರಿತಪಿಸುತ್ತಿದ್ದ ತನ್ನ ತಂದೆಯನ್ನೂ ನೋಡುತ್ತಾ ಶಿಕ್ಷಾಸ್ತಂಭದ ಕಡೆ ಮುಂದುವರೆದನು"೧೮.

ಸಣ್ಣಬೀರ ಹೋದ ರೀತಿ, ಆ ಕಂಬವನ್ನು ತಬ್ಬಿ ನಿಂತ ರೀತಿ, ಎರಡೂ ಕೈಗಳನ್ನು ಜೋಡಿಸಿ ಹಗ್ಗ ಬಿಡಿಸಿಕೊಂಡ ರೀತಿ ಹೇಗಿತ್ತೆಂದರೆ, ಆ ಯೂಪಸ್ಥಂಭಕ್ಕೆ ಬಲಿ ಕಟ್ಟಿಸಿಕೊಳ್ಳುವ ಯಜ್ಞ ವಿಧಾನ ಅವನಿಗೆ ಪೂರ್ವ ಪರಿಚಿತವಾದದ್ದು ಎಂಬುದು ಚೆನ್ನಾಗಿ ಗೊತ್ತಾಗುವಂತಿತ್ತು. ನಾಪತ್ತೆಯಾದ ತಿಮ್ಮಿಯ ವಿಷಯ ತನಗೇನೂ ಗೊತ್ತಿಲ್ಲವೆಂದು ಸಣ್ಣ ಬೀರ ಕೈ ಮುಗಿದು ಹೇಳಿದರೂ ನಂಬದ ಕಲ್ಲಯ್ಯಗೌಡರು ರೋಷಗೊಂಡು ಶಿಕ್ಷಿಸಲು ಮುಂದಾದಾಗ ಸಣ್ಣಬೀರ ಮರುಮಾತಾಡದೆ ಶಿಕ್ಷಾಕಂಬದ ಕಡೆಗೆ ಹೇಗೆ ಹೋದನೆಂಬುದನ್ನು ತಿಳಿಸುವಾಗ ಕೊಡುವ ಮೇಲಿನ ಹೋಲಿಕೆ ಸಚಿತ್ರವಾದದ್ದು. ಗಾಡಿ ಹೊಡೆಯುವವನು ಮತ್ತು ಗಾಡಿಎತ್ತು ಅಂದರೆ ಬಾಯಿರುವ ಮನುಷ್ಯ ಮತ್ತು ಬಾಯಿಲ್ಲದ ಮೂಕ ಪ್ರಾಣಿಗಳ ಮುಖಾಂತರ, ಇರುವವರ ಕೈಯಲ್ಲಿ ಇಲ್ಲದವರು ಪಡುವ ಬವಣೆಯನ್ನು ಅವರು ಮಾಡುವ ಅಧರ್ಮವೇ ಇವರ ಪಾಲಿಗೆ ಕಡ್ಡಾಯ ಧರ್ಮವಾಗಿರುವುದನ್ನು ಧ್ವನಿಸುವ ಶಕ್ತಿ ಪಡೆದಿದೆ.

ಮುಂದೊಂದು ದಿನ ಸಾಬರಿಗೂ, ಹೊಲೆಯರಿಗೂ ನಡೆದ ಜಗಳದಲ್ಲಿ ಯಾರಿಗೂ ತಿಳಿಯದಂತೆ ಇಜಾರದ ಸಾಬಿಯ ಬೆರಳು ಕತ್ತರಿಸಿ, ಕುತ್ತಿಗೆ ಹೆಗಲ ಮೇಲೆ ಘಾತ ಮಾಡುತ್ತಾನೆ. ಆ ಮೂಕ ಒಡೆಯರ ಮೇಲಿನ ತನ್ನ ಆಕ್ರೋಶವನ್ನು ಅವರ ಅಸ್ತ್ರದಂತಿದ್ದ ಸಾಬಿಯ ಮೇಲೆ ತೀರಿಸಿಕೊಳ್ಳುತ್ತಾನೆ. ಇದು ಒಡೆಯರನ್ನು ನೇರವಾಗಿ ಪ್ರತಿಭಟಿಸಲಾಗದ ಸಣ್ಣಬೀರನ ಅಸಹಾಯಕತೆಯನ್ನು ಪ್ರತಿಬಿಂಬಿಸುತ್ತದೆ.

ಅಡಿ ಟಿಪ್ಪಣಿ:

೧. ಗಿರಡ್ಡಿ ಗೋವಿಂದರಾಜು: ನವ್ಯ ವಿಮರ್ಶೆ, ಪು.ಸಂ.- ೧೧೫
೨. ಮು.ಶಿವನಂಜಯ್ಯ: ಕುವೆಂಪು ಕಾದಂಬರಿಗಳಲ್ಲಿ ಜನ ಜೀವನ ಪು.ಸಂ-೬೭-೯೮
೩. ಕುವೆಂಪು: ಮಲೆಗಳಲ್ಲಿ ಮದುಮಗಳು, ಪು.ಸಂ.-೨೨೨-೨೨೩
೪. ಅದೇ ಪು.ಸಂ-೪೭೩
೫. ಅದೇ ಪು.ಸಂ-೧೦
೬. ಅದೇ ಪು.ಸಂ.-೧೦
೭. ಅದೇ ಪು.ಸಂ-೩೨೧
೮. ಅದೇ ಪು.ಸಂ.-೩೨೧
೯. ದೇ.ಜ.ಗೌ: ಸಹ್ಯಾದ್ರಿ, ಅಭಿನಂದನಾ ಗ್ರಂಥ, ಲೇಖನ, ಸದಾಶಿವ ಎಣ್ಣೆಹೊಳೆ: ಕುವೆಂಪು ಕಾದಂಬರಿಗಳಲ್ಲಿ ಬ್ರಾಹ್ಮಣ ಶೂದ್ರ ಪ್ರಜ್ಞೆ, ಪು.ಸಂ.-೮೪೧

೧೦.ಎಸ್.ಚನ್ನಪ್ಪ: ಕುವೆಂಪು ಸಾಹಿತ್ಯ ಸಹ್ಯಾದ್ರಿ, ಪು.ಸಂ.-೧೨೩
೧೧. ದ.ರಾ.ಬೇಂದ್ರೆ: ಒಲವೇ ನಮ್ಮ ಬದುಕು
೧೨. ಕುವೆಂಪು: ಶಶ್ಮಾನ ಕುರುಕ್ಷೇತ್ರಂ
೧೩. ಕುವೆಂಪು: ಮಲೆಗಳಲ್ಲಿ ಮದುಮಗಳು ಪು.ಸಂ-೧೪೪
೧೪. ಅದೇ ಪು.ಸಂ-೧೩೩
೧೫. ಎಂ.ಜಿ.ಕೃಷ್ಣಮೂರ್ತಿ : ಕೃತಿ ಸಂಸ್ಕೃತಿ, ಲೇಖನ, ಆಧುನಿಕ ಭಾರತ ಸಾಹಿತ್ಯ ಮತ್ತು ಇತರ ಲೇಖನಗಳು, ಪು.ಸಂ-೧೩೦
೧೬. ಅದೇ ಪು.ಸಂ-೩೩೬
೧೭. ಎಸ್.ಎಸ್.ರಾಘವೇಂದ್ರರಾವ್:ಶತಮಾನದ ಸಾಹಿತ್ಯ ವಿಮರ್ಶೆ, ಲೇಖನ, ಸುಜನಾ ಕುವೆಂಪು ಕೃತಿಗಳ ತ್ವಾತಿಕ ಹಿನ್ನೆಲೆ, ಪು.ಸಂ-೪೦೬
೧೮. ಕುವೆಂಪು : ಮಲೆಗಳಲ್ಲಿ ಮದುಮಗಳು, ಪು.ಸಂ.-೩೩೪.

# ೨. ಕೆಳವರ್ಗದ ಸಾಂಸ್ಕೃತಿಕ ಜೀವನ

ಸಂಸ್ಕೃತಿ ಮಾನವನ ವಿಶಿಷ್ಟವಾದ ಆಸ್ತಿ. ಇದು ಮನುಷ್ಯನನ್ನು ಪ್ರಾಣಿ ಪ್ರಪಂಚದಿಂದ ಬೇರ್ಪಡಿಸುತ್ತದೆ. ಪ್ರತಿಯೊಂದು ಸಮಾಜವು ತನ್ನದೇ ಆದ ಸಂಸ್ಕೃತಿಯನ್ನು ಹೊಂದಿದೆ. ಸಂಸ್ಕೃತಿ ಎಂಬುದು ಸಾರ್ವತ್ರಿಕ ಹಾಗೂ ಸಾರ್ವಕಾಲಿಕ ಎಲ್ಲಾ ಸಮಾಜದಲ್ಲಿಯೂ ಎಲ್ಲಾ ಕಾಲದಲ್ಲಿಯೂ ಕಂಡು ಬರುತ್ತದೆ. ಸಂಸ್ಕೃತಿ ಬಹು ಅರ್ಥವ್ಯಾಪ್ತಿಯುಳ್ಳ ಕಲ್ಪನೆ ಸಂಸ್ಕೃತಿಯು ಮಾನವನ ಜೀವನ ವಿಧಾನದ ಪ್ರತೀಕ ಅಥವಾ ಜೀವಿತಕ್ರಮದ ಒರೆಗಲ್ಲು. ಸಂಸ್ಕೃತಿಯು ನಮ್ಮ ನಡತೆಯನ್ನು ನಮ್ಮ ದರ್ಶನ ಹಾಗೂ ನೈತಿಕತೆಯನ್ನು, ನಮ್ಮ ರೂಢಿ-ಸಂಪ್ರದಾಯಗಳನ್ನು, ನಂಬಿಕೆ, ಆಚರಣೆಗಳನ್ನು, ಮೌಲ್ಯಾದರ್ಶಗಳನ್ನು, ನಮ್ಮ ಧಾರ್ಮಿಕ, ರಾಜಕೀಯ, ಆರ್ಥಿಕ ಮೊದಲಾದ ಚಟುವಟಿಕೆಗಳನ್ನು ಒಳಗೊಂಡಿದೆ. ತನ್ನ ವ್ಯಕ್ತಿಗತ ಹಾಗೂ ಸಾಮಾಜಿಕ ಜೀವನದಲ್ಲಿ ಮಾನವನು ಸಂಪಾದಿಸಿರುವ ಎಲ್ಲಾ ಅಂಶಗಳನ್ನು ಸಂಸ್ಕೃತಿಯು ಒಳಗೊಂಡಿರುವುದು ಮೆಕೈವರ್ ಮತ್ತು ಪೇಜ್ ಹೇಳುವಂತೆ "ಸಂಸ್ಕೃತಿಯು ನಮ್ಮ ಜೀವನ ಶೈಲಿಯ, ಮೌಲ್ಯಗಳ, ಭಾವನಾತ್ಮಕ ಬಂಧನಗಳ ಹಾಗೂ ಬೌದ್ಧಿಕ ಸಾಧನೆಗಳ ಪ್ರಪಂಚವೇ ಆಗಿದೆ"[೧]

ಪ್ರತಿಯೊಂದು ಸಾಹಿತ್ಯ ಕೃತಿಯೂ ಸಂಸ್ಕೃತಿಯೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದೆ. ಸಾಮಾನ್ಯವಾಗಿ ಯಾವುದೇ ಒಂದು ಸಾಹಿತ್ಯ ಕೃತಿಯು ತನ್ನ ಸಮಕಾಲೀನ ಸಮಾಜದ ಸಾಂಸ್ಕೃತಿಕ ಬದುಕನ್ನು ಪ್ರತಿಬಿಂಬಿಸುವ ಮೂಲಕ ತನ್ನ ಸಮಾಜದ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲುತ್ತದೆ. ಪ್ರಸ್ತುತ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿಯೂ ಮಲೆನಾಡಿನ ಸಾಂಸ್ಕೃತಿಕ ಜೀವನ ಹರಳುಗಟ್ಟಿದೆ.



ಸಂಸ್ಕೃತಿಯ ಏಕರೂಪವಾದುದಲ್ಲ. ಸಂಸ್ಕೃತಿಯ ಅಂಶಗಳಾದ ರೂಢಿ-ಸಂಪ್ರದಾಯ, ನಂಬಿಕೆ, ಆಚರಣೆ, ಮೌಲ್ಯಾದರ್ಶ ಇವು ಸಮಾಜದಿಂದ ಸಮಾಜಕ್ಕೆ, ಜಾತಿಯಿಂದ ಜಾತಿಗೆ ಭಿನ್ನವಾಗಿರುತ್ತವೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯು ಮಲೆನಾಡಿನ ಭಿನ್ನ ಭಿನ್ನ ಜಾತಿಯ ಜನರ ಸಾಂಸ್ಕೃತಿಕ ಬದುಕನ್ನು ತೆರೆದಿಡುವ ಸಂದರ್ಭದಲ್ಲಿ ಕೆಳವರ್ಗದ ಸಾಂಸ್ಕೃತಿಕ ಬದುಕನ್ನು ಚಿತ್ರಿಸುತ್ತದೆ.

ಸಂಸ್ಕೃತಿಯ ಅಂಶವಾದ ಆಹಾರ ಪದ್ಧತಿಯ ಮೇಲೂ ಜಾತಿ ವ್ಯವಸ್ಥೆ ನಿರ್ಬಂಧವನ್ನು ಹೇರಿತ್ತು. ಸಮಾಜದಲ್ಲಿ ಸಾಮಾನ್ಯವಾಗಿ ಹಣ್ಣು, ಹಾಲು, ಬೆಣ್ಣೆ, ಒಣಗಿದ ಫಲ ಇತ್ಯಾದಿಗಳನ್ನು ಯಾರಾದರೂ ಯಾರಿಂದಲಾದರೂ ಸ್ವೀಕರಿಸಬಹುದಾದರೂ ಬೇಯಿಸಿದ ಆಹಾರವನ್ನು ಸ್ವೀಕರಿಸಲು ಮೇಲ್ಜಾತಿಯವರು ಕೆಳಜಾತಿಯವರಿಂದ ಸ್ವೀಕರಿಸಕೂಡದು ಎಂಬ ನಿರ್ಬಂಧವಿತ್ತು. ಕಾದಂಬರಿಯಲ್ಲಿಯೂ ಆಹಾರ ಸ್ವೀಕರಿಸುವ ಸಂದರ್ಭದಲ್ಲಿ ತಮಗಿಂತ ಉತ್ತಮ ಜಾತಿಯವರಿಂದ ಆಹಾರ ಸ್ವೀಕರಿಸುವ ಚಿತ್ರಣವಿದೆಯೇ ಹೊರತು ಮೇಲ್ಜಾತಿಗೆ ಆಹಾರ ನೀಡುವ ಚಿತ್ರಣವಿಲ್ಲ. ಇದು ಸಮಕಾಲೀನ ಸಂದರ್ಭದ ಜಾತಿ ವ್ಯವಸ್ಥೆಯ ಆಚರಣೆಯ ಒಂದು ನಿಯಮವಾಗಿದೆ. ಕೆಳವರ್ಗದವರು ಹೆಚ್ಚು ಮಾಂಸ ಹಾಗೂ ಮದ್ಯ ಪ್ರಿಯರಾಗಿದ್ದರು. ಅಪರೂಪಕ್ಕೆ ಬೇಟೆಯಾಡಿ ಮಾಂಸಾಹಾರ ಗಳಿಸುತ್ತಿದ್ದರು.

ತಿಮ್ಮಪ್ಪ ಹೆಗ್ಗಡೆ ಕೆಲಸಕ್ಕೆ ಆಳುಗಳನ್ನು ಕರೆಯಲು ಬಂದಾಗ ಯಾವ ಆಳು ಬಿಡಾರದಿಂದ ಹೊರಬರದಿದ್ದ ಸಂದರ್ಭದಲ್ಲಿ ಬೈರನ ವಿಚಾರವಾಗಿ "ಬಿಡಾರದ ಒಂದು ಮೂಲೆಯಲ್ಲಿದ್ದ ಕಲ್ಲುಗುಂಡಿನ ಒಲೆಯ ಬಳಿ ಹಿಂದಿನ ದಿನ ದನ ಕಾಯಲು ಹೋಗಿದ್ದಾಗ ಚಿಟ್ಟು ಬಿಲ್ಲಿನಿಂದ ಹೊಡೆದು ಷಿಕಾರಿ ಮಾಡಿದ್ದ ಒಂದು ಚಿಟ್ಟಳಿಲನ್ನೂ ಕುಣಿಗೆ ನೀರು ಹಾಯಿಸಿ ಹೊರ ಹೊರಡಿಸಿ, ಅಟ್ಟಿ ಬೇಟೆಯಾಡಿದ್ದ ಮೂರು ಬೆಳ್ಳಿಲಿಗಳನ್ನೂ ಸುಟ್ಟು ಹಸಿಗೆ ಮಾಡುವ ಕಾರ್ಯದಲ್ಲಿ ತೊಡಗಿದ್ದ ಬೈರ"೮ ಎಂಬ ಚಿತ್ರಣವನ್ನು ಕಾದಂಬರಿಕಾರರು ನೀಡುತ್ತಾರೆ.

ಅದೇ ಸಂದರ್ಭದಲ್ಲಿ ಹೂವಿ ದೊಡ್ಡ ಅಯ್ಯೋರು ಹಂದಿ ಹಸಿಗೆಗೆ ಇಬ್ಬರು ಆಳನ್ನು ಕಳಿಸಬೇಕಂತೆ ಎಂದಾಗ ಬಿಡಾರದ ಆಳುಗಳೆಲ್ಲಾ ನಾ ಮುಂದು ತಾ ಮುಂದು ಎಂದು ಎಲ್ಲರೂ ಅಂಗಳಕ್ಕೆ ಬಂದು ಸೇರಿದಿದ್ದು ಕಾದಂಬರಿಯಲ್ಲಿ ಹೀಗೆ ಚಿತ್ರಿತವಾಗಿದೆ. "ಹಂದಿ ಮತ್ತು ಹಸಿಗೆ ಎಂಬ ಮಾತು ಬಿಡಾರದಿಂದ ಬಿಡಾರಕ್ಕೆ ಮಿಂಚಿನ ವೇಗದಿಂದ ಮುಟ್ಟಿದ್ದೇ ತಡ, ಮುಚ್ಚಿದ ತಟ್ಟಿ ಬಾಗಿಲುಗಳು ಸರಸರನೆ ಒಂದಾದ ಮೇಲೊಂದರಂತೆ ತೆರೆದುಕೊಂಡವು. ಬೆಟ್ಟಳ್ಳಿಗೆ ಹೋಗಬೇಕೆಂದಿದ್ದ ಮಂಜ ಪುಸಕ್ಕನೆ ಕೆಲಸದ ಕತ್ತಿಯನ್ನು ಸೊಂಟಕ್ಕೆ ಸಿಕ್ಕಿಸಿಕೊಳ್ಳುತ್ತಾ ಹಾರಿ ಬಂದನು. ಇಲಿ ಅಳಿಲುಗಳನ್ನು ಅರ್ಧಂಬರ್ಧ ಸುಟ್ಟಂತೆಯೇ ಬುಟ್ಟಿಯ ಅಡಿ ಮುಚ್ಚಿಟ್ಟು ಬೈರ ಹೊರಕ್ಕೆ ನೆಗೆದನು. ಸಿದ್ದ, ಕರಿಸಿದ್ದ, ಬಚ್ಚ, ಸಣ್ಣತಿಮ್ಮ ಪುಟ್ಟ ಅಂಗಳವೆಲ್ಲ ಆಳುಗಳಿಂದ ತುಂಬಿಹೋದಂತಾಯಿತು".೩

ಹೀಗೆ ಮಾಂಸ ಕೆಳವರ್ಗದವರ ಪ್ರಿಯವಾದ ಆಹಾರವಾಗಿದ್ದು ಅದನ್ನು ಬೇಟೆಯ ಮೂಲಕ ಇಲ್ಲವೆ ಒಡೆಯರು ನೀಡುವ ಹಸಿಗೆ ಪಾಲಿನ ಮೂಲಕ ಪಡೆಯುತ್ತಿದ್ದರು. ಕಾದಂಬರಿಯಲ್ಲಿ ಅನೇಕ ಸಂದರ್ಭಗಳಲ್ಲಿ ಕಳ್ಳು ಮತ್ತು ಮಾಂಸದ ವಾಸನೆ ಅಸ್ಪೃಶ್ಯರ ಮೂಗಿಗೆ ಹಿತಕರವೆನಿಸಿ ಬಾಯಲ್ಲಿ ನೀರೂರಿಸಿದ್ದನ್ನು ಚಿತ್ರಿಸಲಾಗಿದೆ. ಉದಾ: ಗುತ್ತಿ ಸೊಸೆನಾಯ್ಕನನ್ನು ಭೇಟಿಯಾದಾಗ ಮತ್ತು ಪೀಂಚಲು ಚಿನ್ನಮ್ಮನನ್ನು ಭೇಟಿಯಾಗಲು ಹೂವಳಿಗೆ ಬಂದಿ ಸನ್ನಿವೇಶಗಳು ಅಂದಿನ ಆ ನಾಡಿನ ಸ್ತ್ರೀ- ಪುರುಷರೆನ್ನದೆ ಮೇಲು-ಕೀಳು ಎನ್ನದೆ ಬಡವ-ಬಲ್ಲಿದನೆನ್ನದೆ ಎಲ್ಲರೂ ಪಾನಾಸಕ್ತರಾಗಿದ್ದರು. ಮೇಲ್ಜಾತಿಯವರು ಕಳ್ಳನ್ನು ಕುಡಿಯುತ್ತಿದ್ದರಾದರೂ ಅದು ಅಪರೂಪಕ್ಕೆ ನೆಂಟರು ಇಷ್ಟರಿಗೆ ಆತಿಥ್ಯ ಮಾಡುವ ಸಂದರ್ಭದಲ್ಲಿ ಸಾಂಪ್ರದಾಯಿಕವಾಗಿ ಮಲೆನಾಡಿನ ವಾತಾವರಣಕ್ಕೆ ಅನಿವಾರ್ಯವಾಗಿ ಕುಡಿಯುತ್ತಿದ್ದರೇ ಹೊರತು ಕೆಳಜಾತಿಯವರಂತೆ ದಿನನಿತ್ಯದ ಚಟವಾಗಿರಲಿಲ್ಲ ಹಾಘೂ ಅವರಂತೆ ಮತ್ತೇರುವಂತೆ ಕುಡಿಯುವ ಪರಿಪಾಠ ಹೊಂದಿರಲಿಲ್ಲ.

ಪ್ರತಿಯೊಂದು ಜಾತಿಯೂ ತನ್ನದೇ ಆದ ಆಹಾರ ಪದ್ಧತಿಯನ್ನು ಹೊಂದಿದ್ದಂತೆಯೇ ಕೆಲವೊಂದು ನಂಬಿಕೆ ರೂಢಿ ಸಂಪ್ರದಾಯಗಳನ್ನು ಹೊಂದಿದ್ದರು. ಮಲೆನಾಡಿನಲ್ಲಿ ಅಸ್ಪೃಶ್ಯರು ಭೂತದ ಬನವನ್ನು ಪ್ರವೇಶಿಸಕೂಡದು ಎಂಬ ನಂಬಿಕೆ ಬಲವಾಗಿತ್ತು.

"ಕೀಳುಜಾತಿಯವರಾಗಿ ಮುಟ್ಟಾಳು ಎಂದರೆ ಅಸ್ಪೃಶ್ಯರಾಗಿದ್ದ ಐತ-ಪೀಂಚಲು ತಾನು ಬಂದ ಭೂತಬನದ ದಾರಿಯಲ್ಲಿ ಬರುವುದಿಲ್ಲವೆಂಬುದು ಅವನಿಗೆ ಗೊತ್ತಿತ್ತು. ಏಕೆಂದರೆ ಭೂತದ ಬನದೊಳಕ್ಕೆ ಮುಟ್ಟಾಳುಗಳು ಕಾಲಿಟ್ಟರೆ ಅವರಿಗೆ ಏನಾದರೂ ಕೇಡು ತಪ್ಪದು ಎಂಬ ನಂಬುಗೆ ಬಲವಾಗಿತ್ತು; ಅದರಲ್ಲಿಯೂ ಕನ್ನಡ ಜಿಲ್ಲೆಯಿಂದ ಬಂದವರಿಗೆ ಘಟ್ಟದ ಮೇಲಣ ದಯ್ಯಗಳೆಂದರೆ ಮಹಾಭಯ, ಆ ಭಯದ ಬೇಲಿಕಟ್ಟೆ ಮಲೆನಾಡಿನ ಜಮೀನುದಾರರು ತಮ್ಮ ತೋಟ, ಗದ್ದೆ,

ಹಿತ್ತಲುಗಳ ಫಸಲು ರಕ್ಷಣೆ ಮಾಡಿಕೊಳ್ಳುತ್ತಿದ್ದರು. ಎಂತಹ ಕಾವಲುಪೊಲೀಸು, ಕಾನೂನು ಮಾಡಲಾರದಷ್ಟು ಸಮರ್ಪಕವಾಗಿ"೪ ಹೀಗೆ ನಂಬಿಕೆ ಸಂಪ್ರದಾಯಗಳು ಕಾನೂನು ಪೋಲಿಸರಂತೆ ಕಾರ್ಯ ನಿರ್ವಹಿಸುತ್ತಿತ್ತು.

ಕೆಳವರ್ಗದಲ್ಲಿ ದೈವ ಶ್ರದ್ಧೆಯಂತಹ ಸಾಂಸ್ಕೃತಿಕ ಮೌಲ್ಯವನ್ನು ಕಾದಂಬರಿಕಾರರು ಚಿತ್ರಿಸುತ್ತಾರೆ. ಭಗವಂತನಿದ್ದಾನೆ ಭಕ್ತಿಯಿಂದ ಪ್ರಾರ್ಥಿಸಿದರೆ ನಮ್ಮ ಕಷ್ಟಗಳನ್ನೆಲ್ಲ ಕಾಪಾಡುತ್ತಾನೆ ಎಂಬ ಬಲವಾದ ನಂಬಿಕೆಯಿಂದಲೇ ಸೇಸಿ ತನ್ನ ಮಗಳು ತಿಮ್ಮಿ ಗುತ್ತಿಯೊಡನೆ ಓಡಿ ಹೋದಾಗ ಅವರಿಗೆ ಯಾವುದೇ ತೊಂದರೆಯಾಗದಿರಲಿ ಎಂದು "ಕಲ್ಲೂರು ಗಣಪನಿಗೆ ಹಣ್ಣು, ಕಾಯಿ ಮಾಡಿಸುವುದಾಗಿ ಹೇಳಿಕೊಂಡು ಒಂದು ಬಿಲ್ಲೆಯನ್ನು ತೊಳೆದು ಅದನ್ನು ಮೂಲೆಯ ಒನಕೆ ದೇವರಿಗೆ ಸುತ್ತು ಬರಿಸಿ ಒಂದು ತಟ್ಟೆಯಲ್ಲಿ ಸುತ್ತಿ ಆಗಲೆ ಕಟ್ಟುಗೊಂಡು ನೇತಾಡುತ್ತಿದ್ದ ಇತರ ಕಾಣಿಕೆಗಳ ಸಾಲಿಗೆ ಇದನ್ನೂ ಜೋತು ಹಾಕಿದಳು"೫. ಹೀಗೆ ದೈವಕ್ಕೆ ಹರಕೆ ಹೊರುವ ಮೂಲಕ ತಮ್ಮ ಸಂಕಷ್ಟಗಳನ್ನು ದೂರ ಮಾಡಬಹುದೆಂಬ ನಂಬಿಕೆಯೂ ಬಲವಾಗಿತ್ತು.

ಕೆಳವರ್ಗದಲ್ಲಿ ಶಿಷ್ಟ ದೇವತೆಗಳಿಗಿಂತ ದುಷ್ಟ ದೇವತೆಗಳ ಆರಾಧನೆಯೇ ಹೆಚ್ಚು ನಮ್ಮ ಜಾತಿ ವ್ಯವಸ್ಥೆಯಲ್ಲಿಯೇ ಕೆಳಜಾತಿಯವರು ದುಷ್ಟ ಶಕ್ತಿಗಳಾದ ಮಾರಿ-ಕಾಳಿ-ಭೂತಗಳನ್ನು ಆರಾಧಿಸಬೇಕಾಗಿತ್ತು. ಕಾದಂಬರಿಯಲ್ಲಿಯೂ ತಿಮ್ಮಿ ಮನೆಬಿಟ್ಟು ಹೋದ ವಿಷಯ ತಿಳಿದು ಅವಳನ್ನ ಹುಡುಕುವ ಸಂದರ್ಭದಲ್ಲಿ ಸೇಸಿಯ ಮೇಲೆ ಜಕಣಿ ಬಂದು "ಜಾತಿಕೆಟ್ಟು ನೀತಿಕೆಟ್ಟು ಕೇರಿಗೆಲ್ಲ ಮುಟ್ಟು ಚಿಟ್ಟು! ಹಲಸಿನ ಮರದ ಮೇಲೆ ನನ್ನ ಜುಟ್ಟು ! ನಾನೇ ಅಡಗಿಸಿದ್ದೇನೆ ! ಹೆದರಬೇಡಿ, ನನಗೆ ಆಯಾರ ಕೊಟ್ಟು ಪೂಜೆ ಮಾಡಿ! ಹೋದ ಹೆಣ್ಣು ಕೂದಲು ಕೊಂಕದೆ ಬರುತ್ತದೆ"೬ ಎನ್ನುತ್ತದೆ.

ಕೆಳವರ್ಗದ ಜನತೆಗೆ ಮದುವೆಯೆಂಬುದು ತಮಗೆ ಮಾತ್ರ ಸಂಬಂಧಿಸಿದ ಸತ್ಕ್ರಿಯೆ ಎಂಬುದರ ತಿಳುವಳಿಕೆಯೂ ಇಲ್ಲದ ಹಾಗೆ ಅವರಲ್ಲಿ ಯಜಮಾನ ಸಂಸ್ಕೃತಿ ಬಲವಂತವನ್ನು ಹೇರಿದೆ ಪರಸ್ಪರ ಹೆಣ್ಣು-ಗಂಡುಗಳು ಒಲಿಯುವುದಿರಲಿ, ಆ ಹೆಣ್ಣು ಗಂಡುಗಳ ತಂದೆ-ತಾಯಿಯರ ಒಪ್ಪಿಗೆಯ ಮೇರೆಗೂ ಅಲ್ಲಿ ಮದುವೆಗಳು ನಡೆಯುವಂತಿಲ್ಲ. ಅವರಿಗೆ ಅನ್ನ ಹಾಕುವ ಒಡೆಯನ ಅಪ್ಪಣೆಯ ಮೇರೆಗೆ ಒಡೆಯರೇ ಸೂಚಿಸಿದ ಹೆಣ್ಣು ಅಥವಾ ಗಂಡಿಗೆ ಮದುವೆ ಮಾಡಬೇಕೆಂಬ ಆಜ್ಞೆಯನ್ನು ಕೆಳವರ್ಗದವರು ಶಿರಸಾವಹಿಸಿ ಅದನ್ನು ಒಂದು ಕರ್ತವ್ಯವೆಂಬಂತೆ ನೆರವೇರಿಸಬೇಕು. ಒಂದು ವೇಳೆ ಆ ಆಜ್ಞೆಯನ್ನು ಮೀರಿದ್ದಾದರೆ ಅವರಿಗೆ ಉಳಿಗಾಲವಿಲ್ಲ. ಹೀಗಾಗಿ ಜೀತದಾಳುಗಳ ವಿವಾಹವು ಅವರವರ ಒಡೆಯರ ಮರ್ಜಿಯನ್ನನುಸರಿಸಿ ನಡೆಯುತ್ತಿತ್ತು.

ಇಂತಹ ಕಡೆಗಳಲ್ಲಿ ಒಡೆಯರ ಸ್ವಾರ್ಥ ಎದ್ದು ಕಾಣುತ್ತದೆ. ತಮ್ಮ ಜೀತದಾಳುಗಳ ಪೈಕಿ ಒಂದು ಹೆಣ್ಣು ವಿವಾಹವಾಗಿ ಬೇರೆ ಊರಿಗೆ ಹೋದರೆ ತಮ್ಮ ದುಡಿಮೆಗೆ ದುಡಿಯುವ ಒಬ್ಬ ಆಳು ಕಡಿಮೆಯಾಗುತ್ತದೆಂಬ ಲೆಕ್ಕಾಚಾರವನ್ನು ಭೂ ಮಾಲೀಕರು ಹಾಕುತ್ತಿದ್ದರು. ಹೀಗಾಗಿ ತಮ್ಮ ಊರಿನ ಕೇರಿಗಳ ಒಳಗೆ ಮಾತ್ರ ಹೆಣ್ಣು ಕೊಡುವ-ತರುವ ವಿವಾಹಗಳಿಗೆ ಅವರು ಸಮ್ಮತಿಸುತ್ತಿದ್ದರು. ಒಂದು ಹೊಸ ಆಳನ್ನು ತಮ್ಮ ಜೀತಕ್ಕೆ ಸೇರಿಸಿಕೊಳ್ಳುವ ಉದ್ದೇಶದಿಂದ ಪಟ್ಟು ಹಿಡಿದು ಮದುವೆ ಮಾಡುತ್ತಿದ್ದರೇ ಹೊರತು ಅವರು ದಾಂಪತ್ಯ ಸುಖವನ್ನು ಅನುಭವಿಸುವುದಕ್ಕಲ್ಲ. ಅದೇನಿದ್ದರೂ ಅನಂತರದ್ದು.

ಒಡೆಯರಿಗೆ ಬೇಕಾಗಿದ್ದುದು ಜೀತ ಮಾಡಲು ಆಳು. ತಮ್ಮ ಹೊಲಗೇರಿಯ ಒಬ್ಬ ಹೆಣ್ಣು ಪರವೂರಿಗೆ ಹೋದರೆ ತಮ್ಮ ಕೆಲಸಕ್ಕೆ ಒಂದಾಳು ಖೋತಾ ಬೀಳುತ್ತದೆ. ಆದ್ದರಿಂದ ಕೇರಿಯ ಹೆಣ್ಣನ್ನು ಕೇರಿಯ ಗಂಡೇ ಮದುವೆಯಾಗಬೇಕೆಂಬುದು ಅವರ ಕಟ್ಟಪ್ಪಣೆ. ಹೀಗಾಗಿ ಜೀತದಾಳುಗಳಾಗಿ ದುಡಿಯುತ್ತಿದ್ದ ಹೊಲೆಯರಲ್ಲಿ ವಿವಾಹವು ಸಾಮಾಜಿಕ ಸಂಬಂಧ ಮಾತ್ರವಾಗಿರದೆ ಆರ್ಥಿಕ ಸಂಬಂಧವನ್ನು ಪಡೆದುಕೊಳ್ಳುವುದರಿಂದ ಹೆಚ್ಚಿನ ಜಟಿಲತೆಯಿಂದ ಕೂಡಿತ್ತು. ಒಟ್ಟಾರೆ ಕೆಳವರ್ಗದಿಂದ ಹಿಡಿದು ಮೇಲ್ವರ್ಗದ ಹೆಣ್ಣು ಗಂಡಿನ ಆಯ್ಕೆ ಮೊದಲಾದ ಕ್ರಿಯೆಗಳು ಕಾದಂಬರಿಯಲ್ಲಿ ಒಂದು ವಿಶಾಲ ಪ್ರಪಂಚವಾಗಿ ರೂಪ ಪಡೆದಿದೆ.

ಯಜಮಾನ ಸಂಸ್ಕೃತಿಯ ದೃಷ್ಟಿಯಿಂದ ಗುತ್ತಿ- ತಿಮ್ಮಿಯರ ವಿವಾಹ ನಿಷಿದ್ಧ ಗುತ್ತಿ ಹಾಗೂ ತಿಮ್ಮಿ ಪರಸ್ಪರ ಒಲಿದಿದ್ದರೂ ಮದುವೆ ಆಗುವಂತಿಲ್ಲ. ಬೆಟ್ಟಳ್ಳಿ ಕಲ್ಲೇಗೌಡರ ಆಜ್ಞೆಯಂತೆ ಬಚ್ಚನಿಗೆ ತಿಮ್ಮಿಯನ್ನು ಕೊಟ್ಟು ಮದುವೆ ಮಾಡಬೇಕು. ಇಲ್ಲಿ ತಿಮ್ಮಿಯ ತಂದೆ ದೊಡ್ಡಬೀರನಿಗೆ ತನ್ನ ಮಗಳ ಮದುವೆಯ ವಿಷಯದಲ್ಲಿ ಆಯ್ಕೆಗೆ ಅವಕಾಶವಿಲ್ಲ. ಒಡೆಯರ ಆಜ್ಞೆಗೆ ವ್ಯತಿರಿಕ್ತವಾಗಿ ನಡೆದರೆ, ಹಲವಾರು ಅನಾಹುತಗಳಾಗುತ್ತವೆ. ಮೊದಲನೆಯದಾಗಿ ಗುತ್ತಿ ಸಿಂಬಾವಿಯ ಭರಮ್ಮೆ ಹೆಗ್ಗಡೆಯ ಜೀತದಾಳಾದ್ದರಿಂದ ಮೂಲತಃ ವೈರಿಯಾದ ಭರಮ್ಮೆ ಹೆಗ್ಗಡೆಗೆ ಸೋತಂತಾಗುತ್ತದೆ. ಜೊತೆಗೆ ತಮ್ಮ ಘಟ್ಟದಿಂದ ಒಬ್ಬ ಆಳು ಕಡಿಮೆಯಾದಂತಾಗುತ್ತದೆ. ಇದು ಗೌಡರಿಗಾಗುವ ಅನುಕೂಲ ತಿಮ್ಮಿಯ ಅಪ್ಪ ಮತ್ತು ಅಣ್ಣಂದಿರಿಗೆ ನರಕ ಶಿಕ್ಷೆ ಇದು ಕಾದಂಬರಿಯಲ್ಲಿ ಘಟಿಸಿಯೇ ಬಿಡುತ್ತದೆ. ಬಚ್ಚನಿಂದ ತಪ್ಪಿಸಲು ಗುತ್ತಿಯು ತಿಮ್ಮಿಯನ್ನು ಹಾರಿಸಿದ, ತಾನು ಮೆಚ್ಚಿದವನನ್ನು ಸೇರಲು ತಿಮ್ಮಿ ಓಡಿದಳು. ಆದರೆ ಅದರಿಂದ ಕಷ್ಟವನ್ನನುಭವಿಸಬೇಕಾದವರು ತಿಮ್ಮಿಯ ಕುಟುಂಬದವರು.

ತಿಮ್ಮಿ ಗುತ್ತಿಯೊಡನೆ ಓಡಿಹೋದ ನಂತರ ತಮ್ಮ ಗದ್ದೆಯಲ್ಲಿ ದುಡಿಯುವ ಜೀತದಾಳು ಕಡಿಮೆಯಾದುದ್ದಕ್ಕಾಗಿ ಕಲ್ಲೇಗೌಡರು ಸಣ್ಣಬೀರನನ್ನು ಎಳೆದು ತರಿಸಿದರು. ''ಇಜಾರದ ಸಾಬು ತನ್ನ ಕೈಯಿಂದ ಸನ್ನೆ ಮಾಡಿದೊಡನೆ ಗಾಡಿಯ ನೊಗಕ್ಕೆ ಹೆಗಲು ಕೊಟ್ಟು ಕೊಟ್ಟೂ ಅಭ್ಯಾಸವಿದ್ದ ಗಾಡಿಎತ್ತು, ಗಾಡಿ ಹೊಡೆಯುವವನು ಮೂಕಿಗೆ ಕೈ ಹಾಕಿ ಎತ್ತಿ ಲೋಚಗುಟ್ಟಿದೊಡನೆಯೇ ನೊಗಕ್ಕೆ ವಿಧೇಯತೆಯಿಂದ ಹೆಗಲು ಕೊಡುವಂತೆ ಸಣ್ಣಬೀರ ನಡುಗುತ್ತಾ ನಾಲಗೆ ಬಿದ್ದುಹೋಗಿ ಮಾತು ಸತ್ತವನಂತೆ, ಒಮ್ಮೆ ಕೆರಳಿ ಕುಳಿತಿದ್ದ ಗೌಡರನ್ನು ಒಮ್ಮೆ ದುಃಖ ದೀನನಾಗಿ ಪರಿತಪಿಸುತ್ತಿದ್ದ ತನ್ನ ತಂದೆಯನ್ನು ನೋಡುತ್ತಾ ಶಿಕ್ಷಾಸ್ತಂಬ ಕಡೆ ಮುಂದುವರೆದನು.''೭

ನಾಪತ್ತೆಯಾದ ತಿಮ್ಮಿಯ ವಿಷಯ ತನಗೇನು ಗೊತ್ತಿಲ್ಲವೆಂದು ಸಣ್ಣಬೀರ ಕೈ ಕೈ ಮುಗಿದು, ಹೇಳಿದರೂ ನಂದದ ಕಲ್ಲಯ್ಯಗೌಡರು ರೋಷಗೊಂಡು ಶಿಕ್ಷಿಸಲು ಮುಂದಾದಾಗ ಸಣ್ಣಬೀರ ಮರುಮಾತನಾಡದೆ ಶಿಕ್ಷಾ ಕಂಬದ ಕಡೆಗೆ ಹೇಗೆ ಹೋದನೆಂಬುದನ್ನು ತಿಳಿಸುವಾಗ ಕೊಡುವ ಮೇಲಿನ ಹೋಲಿಕೆ ಸಚಿತ್ರವಾದದು ಮತ್ತು ಸಾರಗರ್ಭಿತವಾದದ್ದು.

ಸಣ್ಣಬೀರನನ್ನು ಕಲ್ಲಯ್ಯಗೌಡರು ಕಟ್ಟಿಸಿ ಹೊಡೆಯುವಾಗ ತಾಯಿ ಸೇಸಿ ಮಗನನ್ನು ಕಾಪಾಡಲು ಎಲ್ಲ ವಿಧವಾದ ಸಾಮಾಜಿಕ ದಿಗ್ಬಂಧನವನ್ನು ಮೀರಿ ಪ್ರಯತ್ನಿಸುತ್ತಾಳೆ. ಮಾತೃತ್ವ ಶಕ್ತಿಯ ಪ್ರತೀಕವಾಗಿ ಅದನ್ನು ವಿರೋಧಿಸುವ ಬಗೆಯಲ್ಲಿ ಸಾಂಕೇತಿಕತೆಯಿರುವುದನ್ನು ಕುವೆಂಪು ವ್ಯಾಖ್ಯಾನಿಸುತ್ತಾರೆ. ಗೌಡರನ್ನು ಕಂಡರೆ ನೂರು ಮಾರು ದೂರದಲ್ಲಿಯೇ ಕುಗ್ಗಿ ಹೆದರಿ

ಹುದುಗಿಕೊಳ್ಳುವ ಸಹಜ ಸ್ವಭಾವದ ಆ ಹೊಲತಿ ಈಗ ಗೌಡರಿಗೆ ಎದುರಾಗಿ ಕೈಮುಗಿದು ಗಂಡ, ಮಗನ ಬಿಡುಗಡೆಗಾಗಿ ಗೌಡರನ್ನು ಬೇಡುವ ದಿಟ್ಟತನ ತೋರುತ್ತಾಳೆ. ಇದೊಂದು ಅತೀತ ಅಸಾಧಾರಣ ಆವೇಶದ ರೀತಿಯ ಶಕ್ತಿಯ ಪ್ರಕಟಣೆಯೆಂಬುದನ್ನು ಗುರುತಿಸಬಹುದು.

ಮನುಷ್ಯ ಕೆಳಜಾತಿಯಿಂದ ಮೇಲ್ಜಾತಿಗೆ ಹೋಗುತ್ತಿದ್ದಂತೆ ಶಿಷ್ಟತೆಗೆ ಸಮೀಪವಾಗುತ್ತಾ ಸಾಗುತ್ತಾನೆ. ಉದಾ: ವಿವಾಹ ಪೂರ್ವ ಲೈಂಗಿಕತೆ ಮೇಲ್ವರ್ಗದಲ್ಲಿ ನಿಷಿದ್ಧ. ಆದರೆ ಕೆಳವರ್ಗದಲ್ಲಿ ಅದನ್ನು ಪ್ರಕೃತಿ ಸಹಜವಾಗಿ ಸ್ವೀಕರಿಸುತ್ತಾರೆ. ಗುತ್ತಿ ತಿಮ್ಮಿಯರಿಗೆ ವಿವಾಹ ಪೂರ್ವದಲ್ಲಿ ಲೈಂಗಿಕ ಸಂಬಂಧ ಅನ್ಯ ನೆಲೆಗಳಲ್ಲಿ ಆಗಿದ್ದರೂ ಅದು ಕೇವಲ ದೈಹಿಕ ತೃಪ್ತಿಗೆ ಸಂಬಂಧಿಸಿದ ಆಶಯವಾಗಿದೆ. ಅದನ್ನು ನೆನಪಿಸಿಕೊಳ್ಳುವಾಗ ಅವರಿಗೆ ಯಾವುದೇ ಬಗೆಯ ಪಶ್ಚಾತಾಪವಾಗಲಿ ಅಥವಾ ಒಬ್ಬರು ಇನ್ನೊಬ್ಬರಿಗೆ ಮಾಡಿಕೊಂಡ ದ್ರೋಹವೆಂದು ಅಸ್ತಿತ್ವ ಪಡೆಯುವ ಶಿಷ್ಟ ಆಲೋಚನಾ ಧಾಟಿಯನ್ನಾಗಲಿ ತಿರಸ್ಕರಿಸಿ ಬಿಡುತ್ತಾರೆ. ಅಲ್ಲಿ ಲೈಂಗಿಕತೆ ಎಂಬುದು ಹೊಟ್ಟೆಯ ಹಸಿವಿನಷ್ಟೇ ಸಾಮಾನ್ಯ ಸ್ಥಿತಿಯದ್ದಾಗಿದೆ.

ಆದರೆ ಮುಕುಂದಯ್ಯ ಚಿನ್ನಮ್ಮರ ಸಂದರ್ಭಕ್ಕೆ ಇದನ್ನು ಹೇಳಲು ಬರುವುದಿಲ್ಲ. "ಶಿಷ್ಟ ಬದುಕು ಇವರನ್ನು ಹೆಚ್ಚಿನ ಮಟ್ಟಿಗೆ ಪ್ರಜ್ಞಾಸ್ಥಿತಿಯಲ್ಲಿ ಮಾತ್ರ ಪ್ರತಿಕ್ರಿಯಿಸುವಂತೆ ಕ್ರಿಯೆಯನ್ನು ಸಾಧ್ಯವಾಗಿಸುವಂತೆ ಮಾಡುವುದರಿಂದ ಇವರ ನಡುವಿನ ಆರಂಭದ ಕೇವಲ ಪರಿಚಯಾತ್ಮಕ ಸಂಬಂಧ ಕೂಡ ಸಂಕೋಚದಲ್ಲಿ ತಟಸ್ಥವಾಗುತ್ತದೆ. ಅದು ಎಷ್ಟು ಪ್ರಾತಿನಿಧಿಕವೆಂದರೆ ಚಿನ್ನಮ್ಮ ತನ್ನ ಮದುವೆಯಿಂದ ತಪ್ಪಿಸಿಕೊಳ್ಳುವಾಗ ಮುಕುಂದಯ್ಯನೊಡನೆ ಒಂಟಿಯಾಗಿ ಹೋಗುವುದನ್ನು ನಿರಾಕರಿಸುತ್ತಾಳೆ. ಅವನ ಮೋರೆ ನೋಡಲು ಕೂಡ ಅವಳ ಇಡೀ ವ್ಯಕ್ತಿತ್ವ ನಾಚಿಕೆಯ ಸಂಕೋಚದ ಮುದ್ದೆಯಾಗುತ್ತದೆ. ಬದುಕನ್ನು ಕಟ್ಟಿಕೊಡುವ ಕಾಲ ಮತ್ತು ವರ್ಗೀಯ ಆವರಣವು ಆ ಗಳಿಗೆಯ ಭಾವನೆಗಳನ್ನು ಕ್ರಿಯಾತ್ಮಕಗೊಳಿಸುತ್ತಲೇ ಬೆಳೆಯುವ ಮತ್ತು ನಿಯಂತ್ರಿಸುವ ಸಾಧ್ಯತೆಗೆ ಮುನ್ನಡೆಯಾಗುತ್ತದೆ."೮

ವಿಧವಾ ಪುನರ್‌ವಿವಾಹಕ್ಕೆ ಕೆಳವರ್ಗದಲ್ಲಿ ಮುಕ್ತ ಅವಕಾಶವಿತ್ತು. ಇದಕ್ಕೆ ಕಾದಂಬರಿಯ ಒಂದು ಸನ್ನಿವೇಶವನ್ನೇ ಉದಾಹರಿಸಬಹುದು. "ಪಿಜಿಣನ ಆತ್ಮಹತ್ಯೆಯ ಅನಂತರ ಚೀಂಕ್ರ ಎಂದಿಗಿಂತಲೂ ಅತಿಶಯವಾಗಿ ಅಕ್ಕಣಿಯ ಯೋಗಕ್ಷೇಮದ ವಿಚಾರದಲ್ಲಿ ಆಸಕ್ತನಾದನು. ಅಕ್ಕಣಿ ಅವಳ ಗಂಡನ ಕಳೇಬರಕ್ಕೂ ಪ್ರೇತಕ್ಕೂ ಸಲ್ಲಿಸಬೇಕಾಗಿದ್ದ ಕ್ರಿಯೆಗಳಿಗೆಲ್ಲ ಚೀಂಕ್ರನೆ ಹೊಣೆಗಾರನಾಗಿ ನಿಂತು ಕೆಲಸ ಮಾಡಿದನು. ಅಕ್ಕಣಿಗೂ ಚೀಂಕ್ರ ಸೇರೆಗಾರನಿಗೂ ಇದ್ದಿರಬಹುದಾದ ಗುಪ್ತ ಸಂಬಂಧವನ್ನು ಗುಟ್ಟಾಗಿಯೇ ಅರಿತಿದ್ದ ಅವರ ಜಾತಿಯವರಿಗೂ ಇತರರಿಗೂ ಚೀಂಕ್ರನ ಕರುಣೆಯ ದಯೆಯ ಮತ್ತು ಸೇವೆಯ ಅರ್ಥ ಸ್ಪಷ್ಟವಾಗಿಯೇ ಆಗಿತ್ತು; ಇನ್ನು ಅಕ್ಕಣಿ ಚೀಂಕ್ರನನ್ನು ಕೂಡುತ್ತಾಳೆ; ಅದೂ ಸರಿಯೇ ಪ್ರಾಯದ ಹೆಂಗಸು ಗಂಡನಿಲ್ಲದೆ ಬದುಕು ಸಾಗಿಸುವುದು ಎಂದಿಗಾದರೂ ಸಾಧ್ಯವೇ? ಕಂಡ ಕಂಡ ಗಂಡಸರ ಕಾಟಕ್ಕೆ ಒಳಗಾಗಿ ಮೂರು ಹೊತ್ತೂ ಮುಜುಗರದ ಜೀವನ ನಡೆಸುವುದಕ್ಕಿಂತ ಯಾವನಾದರೊಬ್ಬನನ್ನು ಕೂಡಿಕೆಯಾಗಿ, ಮತ್ತೆ ಗರತಿಬಾಳು ಮಾಡುವುದೇ ಯೋಗ್ಯ! ಅಲ್ಲದೆ ಹೆಂಡತಿ ಸತ್ತ ಮೇಲೆ ಕೆಟ್ಟು ಅಲೆಯುತ್ತಿರುವ ಚೀಂಕ್ರನಿಗೂ ಒಂದು ನೆಲೆ ಸಿಕ್ಕಿದ ಹಾಗಾಗುತ್ತದೆ ಅವನ ಮಕ್ಕಳಿಗೂ ಒಂದು ತಾಯಿದಿಕ್ಕು ಇದುವರೆಗೂ ಅತಂತ್ರವಾಗಿದ್ದದ್ದು. ಸುತಂತ್ರವಾಗಿಯೂ ದೊರೆತಂತೆ ಆಗುತ್ತದೆ."೯

ಇಲ್ಲಿ ಆ ಜಾತಿಯ ಜನರೇ ವಿಧವಾ ವಿವಾಹಕ್ಕೆ ಬೆಂಬಲ ನೀಡುವುದನ್ನು ಕಾಣಬಹುದು. ಅವರಿಬ್ಬರ ಗುಪ್ತ ಸಂಬಂಧವನ್ನು ಅರಿತಿದ್ದರೂ ಅದರ ಬಗ್ಗೆ ವ್ಯಂಗ್ಯ ಟೀಕೆಗಳನ್ನಾಡದೆ ಪ್ರಕೃತಿ ಸಹಜವಾಗಿ ಅದನ್ನು ಸ್ವೀಕರಿಸುವುದು ಗೋಚರಿಸುತ್ತದೆ. ಮಾತ್ರವಲ್ಲದೆ, ಕೆಳಜಾತಿ ಮತ್ತು ವರ್ಗಗಳಲ್ಲಿ ಆಚರಣೆಯಲ್ಲಿದ್ದ 'ಕೂಡಿಕೆ' ಪದ್ಧತಿ ಎಂಬ ಉಪಸಾಂಸ್ಕೃತಿಕ ಆಚರಣೆಯ ಮೇಲೆ ಬೆಳಕು ಚಲ್ಲುತ್ತದೆ.

ಆದರೆ ಮೇಲುವರ್ಗದಲ್ಲಿನ ಮಹಿಳೆಯರಿಗೆ ಇಂತಹ ಅವಕಾಶವಿರಲಿಲ್ಲ. ಬ್ರಾಹ್ಮಣ ಜಾತಿಗೆ ಸೇರಿದ ವಿಧವೆಯೊಬ್ಬಳಿಗೆ ಕೇಶ ಮಂಡನ ಮಾಡಿ ಅವಳನ್ನು ವಿಕೃತಗೊಳಿಸುವ ಮೂಲಕ ಕಾಮುಕರ ಕಣ್ಣಿಗೆ ಬಲಿಯಾಗದಂತೆ ನೋಡಿಕೊಳ್ಳುವ ಸಮಾಜದ ಆಶಯವನ್ನು ಕಾದಂಬರಿಕಾರರು ಮಕ್ಕಳ ಮಾತಿನಲ್ಲಿ ವಿಡಂಬನಾತ್ಮಕವಾಗಿ ನಿರೂಪಿಸಿರುವುದನ್ನು ಈ ಸಂದರ್ಭದಲ್ಲಿ ಗಮನಿಸಬಹುದು.

ಒಟ್ಟಾರೆ ಕೆಳವರ್ಗದ ಜನತೆಯನ್ನು ಊಳಿಗಮಾನ್ಯ ವ್ಯವಸ್ಥೆ ಯಾವ ರೀತಿ ತನ್ನ ಹತೋಟಿಯಲ್ಲಿ ಹಿಡಿದಿಟ್ಟಿದೆ ಎಂಬುದನ್ನು ಕಾದಂಬರಿ ಅನೇಕ ಸಂದರ್ಭಗಳಲ್ಲಿ ಎತ್ತಿ ತೋರುತ್ತದೆ. ವ್ಯವಸ್ಥೆಯ ಹಿಡಿತಕ್ಕೆ ಸಿಲುಕಿದ ಕೆಳವರ್ಗದ ಜನತೆ ಯಾವುದೇ ಸ್ವತಂತ್ರ ನಿರ್ಣಯಗಳನ್ನು ಕೈಗೊಳ್ಳುವ ಅವಕಾಶವಿಲ್ಲದೆ ಸೂತ್ರದ ಗೊಂಬೆಗಳಂತೆ ಬದುಕಬೇಕಾಗಿತ್ತು. ವಿವಾಹ ವ್ಯಕ್ತಿಯ ವೈಯಕ್ತಿಕ ವಿಚಾರ. ಆದರೆ ಇಲ್ಲಿ ಅದೂ ಕೂಡ ಒಡೆಯರ ಆಜ್ಞೆಯ ಪ್ರಕಾರವೇ ನಡೆಯಬೇಕಿತ್ತು. ಎಂಬುದು ದಲಿತರ ದಯನೀಯ ಸ್ಥಿತಿಯನ್ನು ಮನಗಾಣಿಸುತ್ತದೆ. ಆದರೆ ಆಶಾದಾಯಕ ಅಂಶವೆಂದರೆ ಕಾದಂಬರಿಯಲ್ಲಿ ಪ್ರಮುಖ ಪಾತ್ರವಹಿಸುವ ದಲಿತ ಜನಾಂಗದ ಗುತ್ತಿ ತಾನು ಮೆಚ್ಚಿದವಳನ್ನು ವಿವಾಹವಾಗುವ ಮೂಲಕ ತಮ್ಮ ಮೇಲೆ ದಬ್ಬಾಳಿಕೆ ನಡೆಸುವ ವ್ಯವಸ್ಥೆಯನ್ನು ಧಿಕ್ಕರಿಸಿ ಹೊಸ ಬಾಳಿನತ್ತಾ ಹೆಜ್ಜೆ ಇಡುತ್ತಾನೆ. ಇದು ಆ ಕಾಲದ ವ್ಯವಸ್ಥೆಗೆ ಕಾದಂಬರಿಕಾರರು ತೋರಿಸಿದ ಪ್ರತಿಕ್ರಿಯೆಯಾಗಿಯೂ ಗಮನಾರ್ಹ ಪ್ರಸಂಗವಾಗಿದೆ.

ಮದುವೆ ಮೊದಲಾದ ಸಂಭ್ರಮಗಳಲ್ಲಿ ಕೆಳಜಾತಿಯವರು ಮೇಲ್ಜಾತಿಯವರನ್ನು ಅನುಕರಿಸಕೂಡದು. ದಿಬ್ಬಣದಲ್ಲಿ ಮದುವೆಯ ಗಂಡು ಕುದುರೆಯ ಮೇಲೆ ಸವಾರಿ ಮಾಡಬಾರದು, ದಂಡಿಗೆಯ ಮೇಲೆ ಕೂತರಂತು ಮದುಮಕ್ಕಳಿಗೂ ದಿಬ್ಬಣದವರಿಗೂ ಉಳಿಗತಿಯಿರಲಿಲ್ಲ ಎಂಬ ಅಂಧ ನಂಬಿಕೆ ಜನರಲ್ಲಿತ್ತು. ಇದು ಕೆಳವರ್ಗದವರನ್ನು ಸವಲತ್ತುಗಳಿಂದ ವಂಚಿಸಲು ರೂಪಿಸಿದ ಒಂದು ಹುನ್ನಾರವಾಗಿತ್ತು.

ಹೀಗೆ ಮಲೆಗಳಲ್ಲಿ ಮದುಮಗಳು ಒಂದು ಅಸಾಧಾರಣ ಪ್ರಾದೇಶಿಕ ಕಾದಂಬರಿ ಆಗಿ ರೂಪುಗೊಂಡಿರುವುದರ ಜೊತೆಗೆ ಮಲೆನಾಡಿನ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಕೆಳವರ್ಗದ ಸಾಂಸ್ಕೃತಿಕ ಬದುಕನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಅಡಿ ಟಿಪ್ಪಣಿಗಳು :

೧.ಚ.ನ.ಶಂಕರರಾವ್ : ಸಮಾಜಶಾಸ್ತ್ರ, ಪು.ಸಂ-೨೦೮
೨. ಕುವೆಂಪು: ಮಲೆಗಳಲ್ಲಿ ಮದುಮಗಳು, ಪು.ಸಂ.-೯೫
೩. ಅದೇ, ಪು.ಸಂ-೯೭
೪. ಅದೇ, ಪು.ಸಂ-೧೩೫
೫. ಅದೇ, ಪು.ಸಂ-೧೬೭
೬. ಅದೇ, ಪು.ಸಂ-೧೭೦
೭. ಅದೇ, ಪು.ಸಂ-೩೩೪
೮. ಡಾ.ಉದ್ದಂಡಯ್ಯ: ಕುವೆಂಪು ಕಥನ, ಪು.ಸಂ.-೮೪
೯. ಕುವೆಂಪು: ಮಲೆಗಳಲ್ಲಿ ಮದುಮಗಳು, ಪು.ಸಂ.-೬೫೦

# ೮. ಸ್ತ್ರೀಯರ ಸ್ಥಾನಮಾನ

ಪ್ರಾಚೀನ ಕಾಲದಿಂದಲೂ ದಲಿತರಂತೆ ಶೋಷಣೆಗೆ ಒಳಗಾದ ಮತ್ತೊಂದು ವರ್ಗ ಸ್ತ್ರೀಯರದು. ಇವರ ಬದುಕೂ ಕೂಡ ಶೋಚನೀಯವಾದುದು ' ನಃ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ' ಎಂಬ ಮನುವಿನ ಮಾತನ್ನೇ ಪಾಲಿಸುತ್ತಾ, ಸ್ತ್ರೀಯರು ಯಾವುದೇ ಸ್ವತಂತ್ರವಿಲ್ಲದೆ ಬದುಕುವಂತೆ ನಡೆಸಿಕೊಂಡು ಬರಲಾಗಿದೆ. ಭಾರತೀಯ ಸಮಾಜದಲ್ಲಿ ಹೆಣ್ಣು ಶೋಷಿತರಲ್ಲ ಶೋಷಿತಳು, ದಲಿತರಲ್ಲಿ ದಲಿತಳು, ಹೀಗಾಗಿ ಆಕೆ ದುರ್ಬಲರಲ್ಲಿ ದುರ್ಬಲಳು. ಆಕೆಗೆ ತನ್ನದೇ ಸ್ವತಂತ್ರ ಅಸ್ತಿತ್ವವಿಲ್ಲ, ಬದುಕು ಇಲ್ಲ.

ತನ್ನ ಸಮಕಾಲೀನ ಸಾಮಾಜಿಕ ವ್ಯವಸ್ಥೆಯನ್ನು ಪ್ರತಿಬಿಂಬಿಸುವುದು ಉತ್ತಮ ಕೃತಿಯ ಲಕ್ಷಣ. ಮಲೆಗಳಲ್ಲಿ ಮದುಮಗಳು ಈ ನಿಟ್ಟಿನಲ್ಲಿ ಗಮನಾರ್ಹವಾದ ಕೃತಿ. ಇದು ಸಮಕಾಲೀನ ಸ್ತ್ರೀಯರ ಸ್ಥಾನಮಾನಗಳನ್ನು ಕುರಿತು ವಿಸ್ತೃತವೂ ಆದ ಚಿತ್ರಣಗಳನ್ನು ಒಳಗೊಂಡಿದೆ. ಇಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ಧಾರ್ಮಿಕವಾಗಿ, ಶೈಕ್ಷಣಿಕವಾಗಿ ಎಲ್ಲ ಹಂತಗಳಲ್ಲೂ ಶೋಷಣೆಗೆ ಒಳಗಾಗಿರುವ ಸ್ತ್ರೀಯರ ಬಗೆಗೆ ಮನೋಜ್ಞವಾದ ವಿಶ್ಲೇಷಣೆಯಿದೆ.

ಸಮಾಜದಲ್ಲಿ ಸ್ತ್ರೀಯರನ್ನು ಒಂದು ವಸ್ತುವಿನಂತೆ ಸಂಬೋಧಿಸುವುದನ್ನು ಕಾದಂಬರಿಯ ಎಲ್ಲ ವರ್ಗಗಳಲ್ಲಿಯೂ ಕಾಣಬಹುದು. ಸಾಮಾನ್ಯವಾಗಿ ಗಂಡನು ತನ್ನ ಹೆಂಡತಿಯನ್ನು ಹೆಸರಿಡಿದು ಕರೆಯುತ್ತಿರಲಿಲ್ಲ. ಕೆಲವು ಗಂಡಂದಿರು ಅವಳು ಎಂಬುದಾಗಿಯೂ , ಇನ್ನು ಕೆಲವರು ಅದು ಎಂಬುದಾಗಿಯೂ ಸಂಬೋಧಿಸುತ್ತಿದ್ದರು. ಶಂಕರಪ್ಪ ಹೆಗ್ಗಡೆ ತಮ್ಮ ಹೆಂಡತಿಯನ್ನು ಕುರಿತ ವಿಷಯವಾಗಿ "ಏ ಕೆಂಪೀ, ಬಾಲೇನ ಅದರ ಹತ್ರಕ್ಕೆ ಕರೆದುಕೊಂಡು ಹೋಗೆ ಅತ್ತಲಾಗಿ ಎಂದು ಹೇಳುತ್ತಾರೆ."೧ ಇಲ್ಲಿ ಶಂಕರಪ್ಪ ಹೆಗ್ಗಡೆಯವರಿಗೆ ಅವರ ಅರ್ಧಾಂಗಿ ಸೀತಮ್ಮನವರು 'ಅದು' ಆಗಿದ್ದರು. ಹಾಗೆ ಕರೆಯುತ್ತಿದ್ದುದರಲ್ಲಿ ಯಾವ ಬುದ್ಧಿಪೂರ್ವಕವಾದ ಇಲ್ಲವೆ ವೈಯಕ್ತಿಕವಾದ ತಿರಸ್ಕಾರ ಭಾವವು ಇರುತ್ತಿರಲಿಲ್ಲ ನಿಜ. ಆದರೆ ಅದು ಸಾಮಾಜಿಕವಾದ ಸಮಷ್ಟಿ ರೂಪದ ಒಂದು ಪರೋಕ್ಷವಾದ ಮತ್ತು ಅತ್ಯಂತ ಆಳದಲ್ಲಿ ಆ ರೀತಿಯ ಸಂಬೋಧನೆ ಒಂದು ಕೀಳು ಭಾವನೆಯನ್ನು ಪ್ರತಿಬಿಂಬಿಸುತ್ತಿತ್ತು.

ಸ್ತ್ರೀಯರೂ ಸಹ ತಮ್ಮ ತಮ್ಮ ಗಂಡಂದಿರನ್ನು ಹೆಸರಿಡಿದು ಕರೆಯುವುದು ರೂಢಿಯಲ್ಲಿರಲಿಲ್ಲ. ತಿಮ್ಮಪ್ಪ ಹೆಗ್ಗಡೆ ಕೆಲಸಕ್ಕೆ ಆಳುಗಳನ್ನು ಕರೆಯಲು ಒಡೇರ ದಿಬ್ಬಕ್ಕೆ ಬಂದಾಗ ಕೇರಿಯಲ್ಲಿ ಆಳುಗಳು ಅವನ ಕೂಗನ್ನೂ ನಿರ್ಲಕ್ಷಿಸಿ ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗಿದ್ದ ಚಿತ್ರಣವನ್ನು ಕಾದಂಬರಿಕಾರರು ನೀಡುತ್ತಾರೆ. ಅಂತಹ ಸಂದರ್ಭದಲ್ಲಿ ಗಿಡ್ಡಿ ಹಾಗೂ ತಿಮ್ಮನ ಸಂಭಾಷಣೆ ಗಮನಾರ್ಹ.

"ತನ್ನ ತಲೆಕೂದಲಿಗಿಂತಲೂ ಉದ್ದವಾಗಿದ್ದ ತನ್ನ ಗಂಡನ ತಲೆಕೂದಲಿನ ಕ್ಷೇಮದಲ್ಲಿ ಆಸಕ್ತಳಾಗಿದ್ದ ಗಿಡ್ಡಿ ತಿರುಗಿ ನೋಡಿ "ಒಡೇರ ದಿಬ್ಬದ ಮ್ಯಾಲೆ ಹೆಗ್ಗಡೇರು ನಿಂತಾರೆ ಯಾರನ್ನೋ ಕೂಗ್ತಿದಾರೆ."

"ಯಾವ ಹೆಗ್ಗಡೇರೆ?"

"ಸಣ್ಣ ಹೆಗ್ಗಡೇರು?"

"ಅಂದರೆ? ಹೆಂಚಿನ ಮನೇರೋ? ಸೋಂಗೆ ಮನೇರೋ?"೧೨ ಎಂದು ಕೇಳಿದಾಗ ಗಿಡ್ಡಿ "ನಾನು ಹೆಸರು ಹೇಳಬಾರದ ಹೆಗ್ಗಡೇರು ಅಂತೀನಿ" ಎಂದಾಗ ತಿಮ್ಮನಿಗೆ ಅವಳ ಮಾತು ಅರ್ಥವಾಗಿ ತನ್ನ ಹೆಂಡತಿಗೆ ತನ್ನ ಮೇಲಿರುವ ಗೌರವಕ್ಕಾಗಿ ಅವಳಲ್ಲಿ ಅಭಿಮಾನ ಉಕ್ಕಿದಂತಾಯಿತು"೩ ಎಂದು ಕಾದಂಬರಿಕಾರರು ಹೇಳಿದ್ದಾರೆ.

ಇಲ್ಲಿ ತಲತಲಾಂತರಗಳಿಂದ ಬೆಳೆದು ಬಂದಿದ್ದ ಸ್ತ್ರೀ ಪುರುಷರ ಅಸಮಾನತೆಯು ಎದ್ದು ಕಾಣುತ್ತದೆ. ಪುರುಷ ಪ್ರಧಾನವಾದ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಸ್ತ್ರೀಯರನ್ನು (ಹೆಂಡತಿ) ಪಶುವಿನಂತೆ ಕಂಡರೆ ಪುರುಷ (ಗಂಡ) ರನ್ನು ದೈವಾಂಶ ಸಂಭೂತರೆಂದು ಅವರನ್ನು ಹೆಸರಿಡಿದು ಕರೆದರೆ ಅದು ಅಗೌರವ ಸೂಚಕ ಹಾಗೂ ಅಶ್ರೇಯಸ್ಕರವೆಂಬ ಭಾವನೆ ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟಿದುದರ ಮೇಲೆ ಕಾದಂಬರಿ ಬೆಳಕು ಚಲ್ಲುತ್ತದೆ.

ಕಾದಂಬರಿಯು ಸ್ತ್ರೀಯರು ಶೈಕ್ಷಣಿಕವಾಗಿ ವಂಚಿತರಾಗಿದ್ದರೆಂಬುದರ ಕಡೆಗೆ ವಿಶೇಷ ಗಮನ ಹರಿಸುತ್ತದೆ. ಒಮ್ಮೆ ಕೋಣೂರಿನ ಹುಡುಗ ಮುಕುಂದಯ್ಯ ವೆಂಕ್ಟಮಾವನಿಗೆ "ಚಿನ್ನೀನ ನಮ್ಮ ಮನೆಗೆ ಬರೆಯೋಕೆ ಕಳ್ಸಿ" ಎಂದು ಯಾವುದೋ ಮಾತಿನ ಸಂದರ್ಭದಲ್ಲಿ ಹೇಳಿದಾಗ, ಹೂವಳ್ಳಿ ವೆಂಕಟಣ್ಣ ನಕ್ಕು! "ಹೌದು ಕಣ್ರೋ ಅವಳನ್ನು ಬರಾವು ಕಲ್ತು ಮಣೆಗಾರಿಕೆ ಮಾಡೋದೊಂದು ಬಾಕಿ!" ಎಂದು ಲೇವಡಿ ಮಾಡಿದ್ದನು."೪

ಲಿಂಗಬೇಧವಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರ ಶಿಕ್ಷಣಕ್ಕೆ ಇರುವ ಆದ್ಯತೆಯನ್ನು ಕುರಿತು ಕಾದಂಬರಿಕಾರರು "ಗಂಡು ಮಕ್ಕಳಿಗೇ ಅಪೂರ್ವವೂ ಅಸಾಧ್ಯವೂ, ಅತಿವಿರಳವೂ ಆಗಿದ್ದ ಓದು ಬರಹವನ್ನು ಹೆಣ್ಣು ಹೆಂಗಸರಿಗೆ ಕಲಿಸಲು ಯಾರೂ ಒಪ್ಪುತ್ತಿರಲಿಲ್ಲ. ಹೆಂಗಸರು ಓದುವುದನ್ನು ಕಂಡೂ ಇರಲಿಲ್ಲ. ಕೇಳಿಯೂ ಇರಲಿಲ್ಲ, ಹೆಂಗಸರು ಓದು ಕಲಿಯುವುದು ಗಂಡಸರು ಸೀರೆಯುಡುವುದಕ್ಕಿಂತಲೂ ಹಾಸ್ಯಾಸ್ಪದವಾಗಿತ್ತು"೫ ಎನ್ನುವ ಮೂಲಕ ಸಮಕಾಲೀನ ಸ್ತ್ರೀಯರು ಶೈಕ್ಷಣಿಕವಾಗಿ ವಂಚಿತರಾಗಿದ್ದರೆಂಬುದನ್ನು ನಿರೂಪಿಸುತ್ತಾರೆ.

ವೈವಾಹಿಕ ಬದುಕಿಗೆ ಸಂಬಂಧಿಸಿದಂತೆ ತಾನು ಮೆಚ್ಚಿದವನನ್ನು ವರಿಸುವ ಆಯ್ಕೆಯ ಸ್ವತಂತ್ರ ಇಲ್ಲಿನ ಹೆಣ್ಣು ಮಕ್ಕಳಿಗಿರಲಿಲ್ಲ. ಯಜಮಾನ ಸಂಸ್ಕೃತಿಯ ದೃಷ್ಟಿಯಿಂದ ಗುತ್ತಿ-ತಿಮ್ಮಿಯರ ವಿವಾಹ ನಿಷಿದ್ಧ. ಹಾಗೆಯೇ ಮುಕುಂದಯ್ಯನ ವಿಷಯದಲ್ಲಿ ಚಿನ್ನಮ್ಮನ ಪರಿಸ್ಥಿತಿ, ತಿಮ್ಮಿಯ ಸ್ಥಿತಿಗಿಂತ ಭಿನ್ನವಲ್ಲ. ಜಾತಿಯ ಶ್ರೇಣೀಕರಣದಲ್ಲಿ ಅವಳು ತಿಮ್ಮಿಗಿಂತ ಮೇಲಿದ್ದರೂ ಓರ್ವ ಹೆಣ್ಣಾಗಿ ಚಿನ್ನಮ್ಮ ಪಿತೃ ಪ್ರಧಾನ ವ್ಯವಸ್ಥೆಗೆ ಬದ್ಧಳಾಗಿರಬೇಕಾಗಿತ್ತು. ಮದುವೆಯ ವಿಷಯದಲ್ಲಿ ಹೆಣ್ಣಿನ ಅಭಿಪ್ರಾಯವನ್ನು ಕೇಳುವುದು ಅನಗತ್ಯ. ಹಿರಿಯರನ್ನು ಆಣತಿಯನ್ನು ಆ ಹೆಣ್ಣು ಒಪ್ಪದಿರುವುದು ಅನಾದರ್ಶ ಎಂದೆ ಆ ಸಮಾಜ ಭಾವಿಸಿತ್ತು.

ಕೋಣೂರಿನ ರಂಗಪ್ಪಗೌಡರು ಮೈಕೈ ತುಂಬಿಕೊಂಡಿದ್ದ ಅಕ್ಕಣಿ ತಮ್ಮ ಲೈಂಗಿಕ ತೃಷೆಯನ್ನು ತೀರಿಸುವಳೆಂಬ ದುರಾಸೆಯ ದೂರಾಲೋಚನೆಯಿಂದ ಅವಳನ್ನು ತಮ್ಮ ಆಳಾಗಿಯೇ ಕೆಲಸಕ್ಕೆ ಸೇರಿಸಿಕೊಳ್ಳುತ್ತಾರೆ. ಇಂಥ ಲೈಂಗಿಕ ಶೋಷಣೆ ದೌರ್ಜನ್ಯಗಳ ಸರಮಾಲೆಯೇ ಕಾದಂಬರಿಯಲ್ಲಿ ಕಂಡು ಬರುತ್ತದೆ. ಇಲ್ಲಿ ಎಲ್ಲಾ ಜಾತಿ ವರ್ಗಗಳಿಗೆ ಸೇರಿದ ಹೆಣ್ಣುಗಳು ಒಂದಲ್ಲಾ ಒಂದು ಶೋಷಣೆಗೆ ಗುರಿಯಾಗಿರುವುದು ಗಮನಾರ್ಹ. ಮಂಜಭಟ್ಟರ ಸೊಸೆ, ಕಿಟ್ಟ ಐತಾಳನ ಹೆಂಡತಿ, ನಾಗಕ್ಕ, ಕಾವೇರಿ, ದೇಯಿ, ಜಟ್ಟಮ್ಮ ಮೊದಲಾದವರು.

ಈ ರೀತಿ ಪ್ರತಿಹಂತದಲ್ಲೂ ಶೋಷಣೆಗೆ ಒಳಗಾಗಿರುವ ಭಾರತೀಯ ಮಹಿಳೆಯರ ಬಗೆಗೆ ಕುವೆಂಪುರವರಿಗೆ ವಿಶೇಷ ಕಾಳಜಿಯಿದೆ. ಹೀಗಾಗಿ ಕುವೆಂಪು ಕಾದಂಬರಿಗಳಲ್ಲಿ ಬರುವ ಸ್ತ್ರೀಯರು ಅದ್ಭುತವಾದ ವ್ಯಕ್ತಿತ್ವವುಳ್ಳವರು. ಅವರ ಕಾದಂಬರಿಗಳ ಕೇಂದ್ರ ಸ್ಥಾನದಲ್ಲಿರುವವರು ಸ್ತ್ರೀಯರೆ. ಅಸ್ಪೃಶ್ಯ ಜಾತಿಗೆ ಸೇರಿದ ತಿಮ್ಮಿಯಿರಲಿ, ಒಕ್ಕಲಿಗ ಜಾತಿಗೆ ಸೇರಿದ ಚಿನ್ನಮ್ಮನಿರಲಿ ಎಲ್ಲರೂ ಸ್ತ್ರೀಯರ ದಮನದ ವಿರುದ್ಧ ಪ್ರತಿಭಟಿಸಿ ಎದ್ದು ನಿಂತ ಕ್ರಾಂತಿಕಾರಿಗಳು. ಅನಿಷ್ಟ ಸಂಪ್ರದಾಯಗಳನ್ನು ಧಿಕ್ಕರಿಸಿ ತಮ್ಮದೆ ರೀತಿಯಲ್ಲಿ ಹೊರಬಂದು ಚರಿತ್ರೆಯನ್ನು ಸೃಷ್ಟಿಸುವ ಪಾತ್ರಗಳಂತೆ ಕಾಣುತ್ತಾರೆ. ಪೀಂಚಲು, ತಿಮ್ಮಿ, ಸೇಸಿ, ಅಕ್ಕಣಿ ಎಲ್ಲರೂ ಕೌಟುಂಬಿಕ ಜವಾಬ್ದಾರಿಯನ್ನು ಹಂಚಿಕೊಂಡರು.

ಇವರಲ್ಲಿ ಮೇಲುವರ್ಗಕ್ಕೆ ಸೇರಿದ ಮಹಿಳೆಯರ ಹುಸಿ ಪ್ರತಿಷ್ಠೆಗಳಾಗಲಿ, ಭ್ರಮೆಗಳಾಗಲಿ ಇಲ್ಲ. ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಸ್ವಾತಂತ್ರ್ಯ ಉಳ್ಳವರೂ, ಲೈಂಗಿಕವಾಗಿ ಗಡಿರೇಖೆಯಿರಿಸಿಕೊಂಡವರಲ್ಲ. ಪಾಪ ಪ್ರಜ್ಞೆಯಿಂದ ನರಳಿದವರಲ್ಲ. ಹಿರಿಯರನ್ನೂ ತಮಗೊಲ್ಲದ ಮದುವೆಯ ಏರ್ಪಾಡುಗಳನ್ನೂ ತಿರಸ್ಕರಿಸಿ ನಡುರಾತ್ರಿಯಲ್ಲಿ ಒಲಿದವರನ್ನು ಸೇರಲು ಹೊರಡುವ ಪ್ರಯತ್ನವು ಇಡೀ ಕಾದಂಬರಿಯ ಚಲನಶೀಲತೆಗೆ ಮೂಲ ನೆಲಯೇ ಹೆಣ್ಣು ಎಂಬುದನ್ನು ನಿದರ್ಶಿಸುವಂತಿದೆ.

ಕೆಳಜಾತಿಯವರೆಂದು ಭಾವಿಸಲಾದ ಹೊಲೆಯರು, ಜೀತದಾಳು, ಗಟ್ಟದಾಳುಗಳಲ್ಲಿ ಸ್ತ್ರೀಯರು ಸ್ವತಂತ್ರ ವ್ಯಕ್ತಿತ್ವ ಪಡೆದುಕೊಂಡವರಾಗಿದ್ದಾರೆ. ಮೇಲುವರ್ಗದ ಹೆಣ್ಣು ಪವಿತ್ರ ಎಂಬ ನೆಲೆಯಲ್ಲಿ ನಿರ್ದೇಶನಗೊಳ್ಳುತ್ತಾಳೆ. ಕೆಳವರ್ಗದ ಜನರನ್ನು ಶೂದ್ರರೆಂದು, ಅಸ್ಪೃಶ್ಯರೆಂದು, ಅವರೊಂದಿಗೆ ಭೇದ ಭಾವದಿಂದ ವರ್ತಿಸಿದ ಬ್ರಾಹ್ಮಣ ಪುರುಷ ವರ್ಗ ತಮ್ಮ ಮನೆಯಲ್ಲಿನ ಸ್ತ್ರೀಯರ ಬಗೆಗೆ ಕೂಡ ಹೆಚ್ಚು ಕಡಿಮೆ ಕೀಳು ಧೋರಣೆಯನ್ನು ಅನುಸರಿಸುತ್ತಿದ್ದರು. ಇದೊಂದು ಚಾರಿತ್ರಿಕ ವಿಪರ್ಯಾಸವಾಗಿ ಕಂಡರೂ ನಿಜ ಸಂಗತಿಯಾಗಿದೆ.

ಆದರೆ ಕೆಳವರ್ಗದ ಹೆಣ್ಣಿಗೆ ಪಾವಿತ್ರ್ಯದ ಮುದ್ರೆಯಿಲ್ಲದೆ ಇರುವುದರಿಂದ ತನ್ನ ದಾರಿಯಲ್ಲಿ ನಡೆವಾಗ ಪರ ಪುರುಷನ ಬಳಕೆಗಳು ಬಹಳವಾಗಿರುವುದರಿಂದ ಆತನ ಬೇಟಕ್ಕೆ ಅವಳು ಒಳಗಾಗುವುದು ಸಾಧ್ಯವಿದೆ. ಅಲ್ಲದೆ ಕೆಳವರ್ಗದ ಹೆಣ್ಣು ಪರಪುರುಷನ ಆಯ್ಕೆಯಲ್ಲಿ ತನ್ನ ದೈಹಿಕ ಅತೃಪ್ತಿಯನ್ನೋ ಅಥವಾ ಅಸಹಾಯಕತೆಯನ್ನೋ ಕೇಂದ್ರವಾಗಿರಿಸಿಕೊಂಡಿರುತ್ತಾಳೆ.

"ಅಕ್ಕಣಿ ಕೀಳು ಜಾತಿಯವಳಾದರೂ, ನಮ್ಮ ಸಹಾನುಭೂತಿಗೆ ಕಾರಣಳಾಗುತ್ತಾಳೆ. ರೋಗಿ ಗಂಡನಿಂದ ಹೆಣ್ಣಿಗೆ ದೊರೆಯಬೇಕಾಗಿದ್ದ ತೃಪ್ತಿ ದೊರೆಯದೆ ಹೆಂಡತಿಯನ್ನು ಕಳೆದುಕೊಂಡ ಚೀಂಕ್ರನಲ್ಲಿ ತೃಪ್ತಿ ಕಾಣುತ್ತಾಳೆ. ತನ್ನ ಸಂಸಾರದಲ್ಲಿ ಸುಖ ಕಾಣುವಂತೆ ಮಾಡಿದ ಚೀಂಕ್ರನಿಗೆ ತನ್ನನ್ನು ಅರ್ಪಿಸಿಕೊಂಡದ್ದು ಒಂದು ರೀತಿಯ ಋಣ ತೀರಿಸುವ ಕೃತಜ್ಞತಾ ಪೂರ್ವಕ ಪ್ರತ್ಯುಪಕಾರವೆಂದು ಬಗೆದಳೇ ಹೊರತು ಅಕಾರ್ಯವೆಂದಲ್ಲ. ಅನಿವಾರ್ಯತೆ ಆಕೆಯನ್ನು ಅಧಃಪತನಕ್ಕೆ ತಳ್ಳಿತು."[೬]

ಕೆಳವರ್ಗದ ಸ್ತ್ರೀಯರು ಪರಪುರುಷನೊಡನೆ ದೈಹಿಕ ಸಂಪರ್ಕ ಹೊಂದುವುದನ್ನು ಗಂಭೀರ ಸ್ವರೂಪದ ಅಪಾವಿತ್ರ್ಯವೆಂದು ಭಾವಿಸಿರಲಿಲ್ಲ. ಆದರೆ ಮೇಲ್ವರ್ಗದ ಸ್ತ್ರೀಯರಲ್ಲಿ ಇದಕ್ಕೆ ಅವಕಾಶವಿಲ್ಲ. ಹಾಗೆ ಮಾಡುವುದು ಪಾಪ ಕಾರ್ಯವೆಂಬುದನ್ನು ಅವರಿಗೆ ವ್ಯವಸ್ಥೆ ಮೊದಲಿನಿಂದಲೂ ಮನದಟ್ಟು ಮಾಡಿರುತ್ತದೆ. ಬಹುಶಃ ಈ ಕಾರಣಕ್ಕಾಗಿಯೇ ನಾಗಕ್ಕ ಚಿಕ್ಕವಯಸ್ಸಿಗೆ ಗಂಡನನ್ನು ಕಳೆದುಕೊಂಡು ದಾಂಪತ್ಯ ಸುಖದಿಂದ ವಂಚಿತಳಾಗಿದ್ದರೂ ತನಗಾಗಿ ಮರುಮದುವೆಯಾಗುವ ನಿರ್ಧಾರವನ್ನು ವಿರೋಧಿಸುತ್ತಾಳೆ. ಹಾಗೂ ಇನ್ನೂ ಮೇಲ್ಜಾತಿಯಾದ ಬ್ರಾಹ್ಮಣರಲ್ಲಿ ಗಂಡ ಸತ್ತ ಸ್ತ್ರೀಯರನ್ನು ವಿಕಾರಗೊಳಿಸುವ ಪರಿಪಾಠವಿದ್ದುದನ್ನು ಕಾಣಬಹುದು.

ಕೆಳವರ್ಗದ ಸ್ತ್ರೀಯರು ತಮ್ಮ ಪುರಷರಿಗೆ ಸರಿ ಸಮಾನ ಸ್ಥಾನಮಾನಗಳನ್ನು ಹೊಂದಿದ್ದಾರೆ. ಬೇಲರ, ಬಿಲ್ಲವರ, ಹಲಸರ, ಹೊಲೆಯರ ಸ್ತ್ರೀಯರು ತಮ್ಮ ತಮ್ಮ ಪುರುಷರಂತೆ ಎಲ್ಲ ಕೆಲಸ ಕಾರ್ಯಗಳಲ್ಲೂ ಕಾಣಿಸಿಕೊಂಡಿದ್ದಾರೆ. ಕೃಷಿ, ಕೂಲಿ, ಬೇಟೆಗಳಲ್ಲಿ ಪುರಷರಂತೆ ದುಡಿಯಬಲ್ಲ. ಹೆಚ್ಚಿನ ಸ್ವಾತಂತ್ರ್ಯವನ್ನು ಅನುಭವಿಸಿದ್ದಾಳೆ. ತಿಮ್ಮಿ, ಪೀಂಚಲು, ಅಕ್ಕಣಿಯರು ಗದ್ದೆಗಳಲ್ಲಿ ಸಸಿ ನೆಡವುದಿರಲಿ ಭತ್ತ ಕೊಯ್ಯುವುದಿರಲಿ, ತೆನೆ ಹೊಡೆಯುವುದಿರಲಿ, ಮೈ ಮುರಿದು ದುಡಿಯುತ್ತಾರೆ. ಜೇನುಕೀಳುವಲ್ಲಿ ಪೀಂಚಲು ಪಿತನಿಗಿಂತ ಎತ್ತಿದ ಕೈ, ಅಷ್ಟೆ ಅಲ್ಲ ತನ್ನ ಗಂಡನಿಗಿಂತ ಹೆಚ್ಚಾಗಿ ಸಂಪಾದಿಸಬಲ್ಲವಳಾಗಿದ್ದಾಳೆ.

ಅಂದರೆ ಕೆಳವರ್ಗದ ಸ್ತ್ರೀಯರು ತಮ್ಮ ಪುರುಷರನ್ನು ಅವಲಂಬಿಸದೆ ಸ್ವಾಭಿಮಾನಿಗಳಾಗಿದಾರೆ. ಗಂಡ ಅನಾರೋಗ್ಯದಿಂದ ಮಲಗಿದರೆ ಅಕ್ಕಣಿಯೇ ಮನೆ ನಡೆಸುತ್ತಾಳೆ. ಒಡೆಯರ ಕ್ರೌರ್ಯವನ್ನು ಸಹಿಸಿಯೂ ತನ್ನ ಮಗಳ ಭವಿಷ್ಯವನ್ನು ಉತ್ತಮಗೊಳಿಸುವ ಸೇಸಿಯಾಗಲಿ, ತನಗೆ ಬೇಕಾದವನನ್ನು ವಿವಾಹವಾಗಲು ಪ್ರತಿರೋಧಗಳನ್ನು ಧೈರ್ಯದಿಂದ ಎದುರಿಸುವ ತಿಮ್ಮಿಯಾಗಲಿ ತಮ್ಮ ವ್ಯಕ್ತಿತ್ವಕ್ಕೆ ಗೌರವ ತಂದುಕೊಂಡಿದ್ದಾರೆ. ತಿಮ್ಮಿಯ ತನಗೆ ಅನಿವಾರ್ಯವಾಗಿದ್ದ ಅಧೀನತೆಯನ್ನು ಧಿಕ್ಕರಿಸಿ ಗುತ್ತಿಯ ಹಿಂದೆ ಬರುವುದು ತನ್ನ ಮಗನಾದ ಸಣ್ಣಬೀರನನ್ನು ಹುಣಸೆ ಬರಲಿನಿಂದ ಬಡಿಯುತ್ತಿದ್ದ ಇಜಾರದ ಸಾಬಿಯನ್ನು ತಡೆಯುವ ಮೂಲಕ ಗೌಡರ ಮುಂದೆ ನಿಲ್ಲಲಾಗದಿದ್ದ ವರ್ಗಕ್ಕೆ ಸೇರಿದ ಸೇಸಿ ಪ್ರತಿಭಟಿಸಿ ನಿಲ್ಲುವುದು ಮನುಷ್ಯ ಸಂಬಂಧಗಳಲ್ಲಿ ಅತಿ ಮುಖ್ಯ.

ಕಾದಂಬರಿಯ ಸ್ತ್ರೀಯರೆಲ್ಲರೂ ಒಂದೇ ವೃತ್ತದಲ್ಲಿ ಕೇಂದ್ರೀಕೃತವಾಗಿರುವುದರಿಂದ ಅವರಲ್ಲಿ ಮೇಲು-ಕೀಳೆಂಬ ಭಾವನೆಗೆ ಅವಕಾಶವೇ ಇಲ್ಲ. ಲೈಂಗಿಕ ತೃಪ್ತಿಗಾಗಿ ಅಲ್ಲಿನ ಜನ ಏನು ಬೇಕಾದರೂ ಮಾಡಲು ಸಿದ್ಧರಿದ್ದರಿಂದ ಹೆಣ್ಣು ಒಂದು ರೀತಿಯಲ್ಲಿ ಮುಖ್ಯಳಾಗಿದ್ದಳು. ಹೀಗಾಗಿ ಹೆಣ್ಣು ತಾನು ಮೆಚ್ಚಿದವನನ್ನು ಸೇರಲು, ಇಲ್ಲವೆ ಮೆಚ್ಚದವನಿಂದ ತನ್ನನ್ನು ರಕ್ಷಿಸಿಕೊಳ್ಳುವ ಕಾರ್ಯವೇ ಕಾದಂಬರಿಯಲ್ಲಿ ನಡೆದು ಗೌಡ ಸ್ತ್ರೀ, ಬೇಲ ಸ್ತ್ರೀ, ಹೊಲೆಯ ಸ್ತ್ರೀ ಎನ್ನದೆ ಎಲ್ಲಾ ಸ್ತ್ರೀಯರೂ ಒಬ್ಬರಿಗೊಬ್ಬರು ಸಹಾಯಕರಾಗಿ ನಿಂತು ಅನ್ಯೋನ್ಯ ಬಾಳನ್ನು ಬಾಳಿದ್ದಾರೆ.

ಹುಲಿಕಲ್ಲು ನೆತ್ತಿಯ ಮೇಲೆ ಕುಳಿತ ತಿಮ್ಮಿ ಮದುಮಗಳು ಚಿನ್ನಮ್ಮನ ಕ್ಷೇಮಕ್ಕಾಗಿ ಹಾತೊರೆಯುವುದು, ಮಳೆಯಲ್ಲಿ ನೆನೆದು ಒದ್ದೆಯಾದ ತಿಮ್ಮಿಯನ್ನು ಪೀಂಚಲು ತಮ್ಮ ಗುಡಿಸಲಿಗೆ ಕರೆದೊಯ್ದು ಬೆಂಕಿಯಲ್ಲಿ ಒದ್ದೆ ಆರಿಸುವುದು, ಚಿನ್ನಮ್ಮ ಮುಕುಂದಯ್ಯನನ್ನು ಸೇರುವ ಪ್ರತೀ ಸಂದರ್ಭದಲ್ಲಿಯೂ ಪೀಂಚಲು ಅವಳಿಗೆ ಸಹಾಯಕಳಾಗಿ ನಿಲ್ಲುವುದು ಪೀಂಚಲು-ಚಿನ್ನಮ್ಮನ ಗಾಢ ಸಂಬಂಧವನ್ನು ಸೂಚಿಸುವುದಲ್ಲದೆ ಕೆಳವರ್ಗದ ಮಹಿಳೆಯರಲ್ಲಿದ್ದ ಮಾನವೀಯ ಸಂಬಂಧಗಳನ್ನು ಪ್ರತಿನಿಧಿಸುತ್ತದೆ.

ಒಟ್ಟಾರೆ ಮೇಲ್ವರ್ಗದ ಸ್ತ್ರೀಯರಿಗಿಂತ ಕೆಳವರ್ಗದ ಸ್ತ್ರೀಯರು ಹೆಚ್ಚು ಸ್ವಾತಂತ್ರ್ಯ ಸಮಾನತೆಗಳನ್ನು ಪಡೆದಿರುವರು, ಅವರು ತಮ್ಮ ಬೇಕು-ಬೇಡಗಳನ್ನು ಪೂರೈಸಿಕೊಳ್ಳಬಲ್ಲ ಸಾಮರ್ಥ್ಯ ಪಡೆದಿದ್ದಾರೆ. ಇದಕ್ಕೆ ಕಾರಣವೂ ಸ್ಪಷ್ಟವಿದೆ. ದುಡಿಮೆಯ ಅವಕಾಶವಿರುವ ಸ್ತ್ರೀಯರಾಗಿ ಸ್ವಂತಿಕೆ ಇದೆ. ದುಡಿಮೆಯು ಆರ್ಥಿಕ ಸ್ಥಿತಿಗತಿಗಳ ನಿರ್ಣಾಯಕ ಅಂಶವಾದುದರಿಂದ ಕೆಳವರ್ಗದ ಸ್ತ್ರೀಯರು ಆರ್ದಿಕ ಘಟಕವಾಗುತ್ತಾರೆ. ಅದಕ್ಕಾಗಿಯೇ ಆಕೆ ಇನ್ನೊಬ್ಬರ ಹಂಗಿನಲ್ಲಿದ್ದು ಎಲ್ಲಾ ಅನ್ಯಾಯಗಳನ್ನು ಕಣ್ಣುಮುಚ್ಚಿ ಒಪ್ಪಿಕೊಳ್ಳಲಾರಳು. ಸೇಸಿ, ದೇಯಿ, ಅಕ್ಕಣಿಯರು ದುಡಿಮೆಯ ಬದುಕಿನಲ್ಲಿ ತಮ್ಮ ಆಸೆ ನಿರಾಸೆಗಳಿಂದ, ಬೇಕು-ಬೇಡಗಳಿಗೆ ವಾಸ್ತವವಾಗಿ ಸ್ಪಂದಿಸಿದ್ದಾರೆ. ದೇಯಿ ಗಂಡನ ದೌರ್ಜನ್ಯಕ್ಕೆ ಬಲಿಯಾದರೆ, ಅಕ್ಕಣಿ ಗಂಡನ ದೌರ್ಬಲ್ಯದಿಂದ ವ್ಯಥೆ ಪಡುತ್ತಾಳೆ. ಪೀಂಚಲು ಬಡತನದಲ್ಲೂ ನಗುತ್ತಾ ಬಾಳುತ್ತಾಳೆ.

ಕೆಳಹಂತದ ಹೆಣ್ಣಿಗೆ ಲೈಂಗಿಕ ಸಂಬಂಧ ಆಘಾತವನ್ನೇನುಂಟು ಮಾಡುವುದಿಲ್ಲ. ಮುಕುಂದಯ್ಯ ಬಯಸಿದರೆ ತನ್ನನ್ನು ಅರ್ಪಿಸಿಕೊಳ್ಳಲು ಪೀಂಚಲು ಸಿದ್ಧ. ಆದರೆ ಗಂಡಿನ ನೆಲೆಯಲ್ಲಿ ಈ ಪ್ರಜ್ಞೆ ಬದಲಿ ಆಶಯಗಳನ್ನು ಸೃಷ್ಟಿಸುತ್ತದೆ. ಐತ ಹೆಣ್ಣಿನ ಆ ಬಗೆಯ ಪ್ರಜ್ಞೆಯನ್ನು ಕೌಟುಂಬಿಕ ಭದ್ರತೆಯ ಹಿನ್ನೆಲೆಯಲ್ಲಿ ವಿರೋಧಿಸುತ್ತಾನೆ. ಆದರೆ ಗುತ್ತಿಯ ಆಶಯ ಬಹಳ ಭಿನ್ನ. ಗಂಡು ಹೆಣ್ಣಿನ ದೈಹಿಕ ಸಂಬಂಧಗಳು ದೇಹದ ಕೋರಿಕೆಯಾಗಿ ಮಾತ್ರವೇ ಅಸ್ತಿತ್ವ ಪಡೆಯುವುದರಿಂದ ಮತ್ತು ಅದು ಅವರಿಬ್ಬರ ಮಾನಸಿಕ ಆಯಾಮಗಳನ್ನು ಒಳಗೊಳ್ಳುವುದಿಲ್ಲವಾದ್ದರಿಂದ ಗುತ್ತಿಯ ಅಭಿಪ್ರಯವು ಬೇರೊಂದು ಜೀವಿಯ ಜೀವದ ಬಗೆಗೆ ಕಾತುರದಿಂದ ಕಳವಳದಿಂದ ಮರುಗುತ್ತಿರುತ್ತದೆ.

ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಕಂಡುಬರುವ ಸ್ತ್ರೀಯರು ಸಂಪ್ರದಾಯವನ್ನು ಮೀರಿ ಬದಲಾಗುತ್ತಿದ್ದ ಸಾಮಾಜಿಕ ಧೋರಣೆಗಳಿಗೆ ಸ್ಪಂದಿಸಿದವರು ಚಿನ್ನಮ್ಮ, ತಿಮ್ಮಿಯರು ಸೀತೆಯಂತೆ ಕೊರಗುತ್ತ ಕುಳಿತವರಲ್ಲ. ತಮ್ಮ ಸಂಗಾತಿಯ ಆಯ್ಕೆಯ ಹಕ್ಕನ್ನು ತಾವೇ ನಿರ್ಣಯಿಸುವ ಸ್ವತಂತ್ರ ವ್ಯಕ್ತಿತ್ವದವರು. ಕೌಟುಂಬಿಕ ಚೌಕಟ್ಟು ಒಪ್ಪದಿದ್ದಾಗ ಅದನ್ನು ಕಿತ್ತೆಸೆದು ಹೊರಬಂದವರು. ವಿವೇಕ ವಿಚಾರಗಳಿಗೆ ಗಟ್ಟಿಯಾದವರು. ಜೀವೋನ್ಮುಖತೆಯ ಕಡೆಗೆ ತುಡಿದವರು. ತಾವು ಬಯಸಿದವರನ್ನು ಕೂಡುವ ಸ್ವಾತಂತ್ರ್ಯ ಗಳಿಸಿಕೊಂಡವರು. ಸಾಮಾಜಿಕ ಕಟ್ಟುಪಾಡುಗಳನ್ನು ಉಲ್ಲಂಘಿಸಿ ತಮ್ಮ ಬಾಳ ಸಂಗಾತಿಗಳನ್ನು ಕೂಡಿದವರು.

ಒಟ್ಟಾರೆ ಭಾರತೀಯ ಸಮಾಜದಲ್ಲಿ ಶೂದ್ರ ವರ್ಗದ ನೆಲೆಯಲ್ಲಿಯೇ ಹೆಣ್ಣು ಇರುವುದರಿಂದ ಶೂದ್ರ ವರ್ಗದ ಬಿಡುಗಡೆಯೊಂದಿಗೆ ಸ್ತ್ರೀ ಬಿಡುಗಡೆ, ಉದ್ದಾರವಿದೆ ಎಂಬುದು ಸ್ವಭಾವತಃ ಸ್ತ್ರೀ ಪರವಾದ ಧೋರಣೆ ಇರುವ ಕುವೆಂಪು ಅವರ ನಿಲುವು. ಇದು ನಿಚ್ಚಳವಾಗಿ ಅವರ ಕಾದಂಬರಿಗಳು ಇದಕ್ಕೆ ಹೊರತಲ್ಲ. ಕಾದಂಬರಿಗಳ ಶೀರ್ಷಿಕೆಗಳೇ ಈ ಹೇಳಿಕೆಯನ್ನು ಪ್ರತಿಧ್ವನಿಸುತ್ತವೆ. ಒಟ್ಟಾರೆ ಹೆಣ್ಣಿನ ಔನ್ನತ್ಯವನ್ನು ಪ್ರತಿಪಾದಿಸಿ ಸಾಮಾಜಿಕ ನ್ಯಾಯವನ್ನು ನಿರ್ವಹಿಸಿದ ಮಹಾನ್ ಲೇಖಕರು ಕುವೆಂಪು.

**ಅಡಿ ಟಿಪ್ಪಣಿಗಳು:**

೧. ಕುವೆಂಪು: ಮಲೆಗಳಲ್ಲಿ ಮದುಮಗಳು , ಪು.ಸಂ.-೮೫
೨. ಅದೇ ಪು.ಸಂ.- ೭೦
೩. ಅದೇ ಪು.ಸಂ.- ೭೦
೪. ಅದೇ ಪು.ಸಂ-೯೩
೫. ಅದೇ ಪು.ಸಂ-೯೩
೬. ರಾ.ಗುರುಪಾದ ಮರಿಗುದ್ದಿ: ಕುವೆಂಪು ಕಾದಂಬರಿಗಳು ಪು.ಸಂ.-೭೯

# ೬. ಕೆಳವರ್ಗದ ಭಾಷೆ

ಸೃಷ್ಟಿಯ ಇತರ ಜೀವಜಂತುಗಳಿಂದ ಮನುಷ್ಯನನ್ನು ಪ್ರತ್ಯೇಕಿಸುವ ಅಂಶಗಳಲ್ಲಿ ಭಾಷೆಯೂ ಒಂದು. ಮಾನವ ತನ್ನ ಭಾವನೆ, ಆಲೋಚನೆ, ಅಭಿಪ್ರಾಯಗಳನ್ನು ಇತರರೊಂದಿಗೆ ಹಂಚಿಕೊಳ್ಳುವ ಸಲುವಾಗಿ ಕಂಡುಕೊಂಡ ಸಮರ್ಥವಾದ ಸಾಧನವೇ ಭಾಷೆ. ಸಂಪರ್ಕ ಸಾಧನವೆನಿಸಿರುವ ಭಾಷೆ ಸಂಸ್ಕೃತಿವಾಹಕವಾಗಿದ್ದು, ಒಂದು ಪೀಳಿಗೆಯಿಂದ ಮತ್ತೊಂದು ಪೀಳಿಗೆಗೆ ಸಂಸ್ಕೃತಿಯನ್ನು ವರ್ಗಾಯಿಸುತ್ತವೆ. ಭಾಷೆಯು ಸಾಮಾಜಿಕ, ರಾಜಕೀಯ, ಭೌಗೋಳಿಕ, ಪ್ರಾದೇಶಿಕ ಅಂಶಗಳಿಗನುಗುಣವಾಗಿ ಭಿನ್ನತೆಯನ್ನು ಹೊಂದಿರುತ್ತದೆ. ಇದರ ಫಲವಾಗಿ ರಾಷ್ಟ್ರಭಾಷೆ, ಪ್ರಾದೇಶಿಕ ಭಾಷೆ, ವ್ಯಕ್ತಿಭಾಷೆಗಳೆಂಬ ವರ್ಗೀಕರಣವಾಗಿದೆ.

ಒಂದು ಪ್ರದೇಶದ ಬದುಕನ್ನು ಆ ಪ್ರದೇಶದ ಜನರಾಡುವ ಭಾಷೆಯಲ್ಲೇ ಅಭಿವ್ಯಕ್ತಿಸಿದಾಗ ಅವರ ಬದುಕಿನ ಚಿತ್ರಣ ಯಥಾರ್ಥವಾಗಿ, ನೈಜವಾಗಿ ಅಭಿವ್ಯಕ್ತಿಗೊಳ್ಳುತ್ತದೆ. ಹೀಗೆ ಪ್ರಾಮಾಣಿಕ ಭಾಷೆಯನ್ನು ತಮ್ಮ ಕಾವ್ಯ ಕೃತಿಗಳಲ್ಲಿ ಅಭಿವ್ಯಕ್ತಿಸಿದ ಸಾಹಿತಿಗಳಲ್ಲಿ ಕುವೆಂಪುರವರು ವಿಶಿಷ್ಟವಾಗಿ ನಿಲ್ಲುತ್ತಾರೆ. ಈ ಹಿನ್ನೆಯಲ್ಲಿ ನೋಡುವುದಾದರೆ ಅವರ ಮಲೆಗಳಲ್ಲಿ ಮದುಮಗಳು ಕಾದಂಬರಿಯು ಮಲೆನಾಡಿನ ಜನಜೀವನದ ಬದುಕನ್ನು ಆ ಪ್ರಾದೇಶಿಕತೆಯಲ್ಲೇ ಕಟ್ಟಿಕೊಡುತ್ತಾರೆ.

ಕಾದಂಬರಿಯ ನಿರೂಪಣೆಯ ಸಂದರ್ಭದಲ್ಲಿ ಗ್ರಂಥಸ್ಥ ಭಾಷೆಯನ್ನು ಬಳಸುವ ಕಾದಂಬರಿಕಾರರು ಪಾತ್ರಗಳ ಸಂಭಾಷಣೆ ಬಂದಾಗ ಅಲ್ಲಿನ ಪ್ರಾದೇಶಿಕ ಭಾಷೆಯನ್ನೆ ಬಳಸಿರುವುದು ವಿಶೇಷ, ಅದರಲ್ಲೂ ಕೆಳವರ್ಗದ ಪಾತ್ರಗಳ ಸಂಭಾಷಣೆಯಲ್ಲಿ ಗ್ರಾಮ್ಯಭಾಷೆಯ ಸೊಗಡು ಯಥೇಚ್ಛವಾಗಿ ಹರಳುಗಟ್ಟಿ ನಿಂತಿದೆ.

ಭಾಷೆ ಹೆಚ್ಚು ವಿಶಿಷ್ಟವಾಗಿ ಸತ್ವ ಪೂರ್ಣವಾಗಿ ಗ್ರಾಮ್ಯ ರೂಪದಲ್ಲಿ ಕಂಡು ಬರುವುದು ಕೆಳವರ್ಗದ ಜನರಲ್ಲಿ ಬದಲಾವಣೆ ಆಧುನಿಕತೆಗಳ ಪ್ರಭಾವಕ್ಕೆ ಅಷ್ಟು ಬೇಗ ಒಳಪಡದ ಮತ್ತು ತಮ್ಮ ಸಾಂಪ್ರದಾಯಿಕ ಬದುಕನ್ನು ಚಾಚೂ ತಪ್ಪದೆ ಅನುಸರಿಸಿಕೊಂಡು ಬರುವ ಹೊಲೆಯರು, ಬೇಲರು, ಹಲಸರು ಮಲೆನಾಡಿನಲ್ಲಿದ್ದರು. ಅವರ ಮಾತು ಅಲ್ಲಿಯ ಸೊಗಸು ಸೊಗಡನ್ನು ಪಡೆದುಕೊಂಡಿದೆ.

ಕಾದಂಬರಿಯಲ್ಲಿ ಕಂಡುಬರುವ ಭಾಷೆಯಲ್ಲಿ ಲೇಖಕರ ಔಚಿತ್ಯ ಪ್ರಜ್ಞೆ ಗಮನಾರ್ಹವಾದದ್ದು. ಇಲ್ಲಿ ಪಾತ್ರಕ್ಕೆ ತಕ್ಕಂತೆ ಅವರು ಭಾಷೆಯನ್ನು ಅಳವಡಿಸಿಕೊಂಡಿದ್ದಾರೆ. ಆದುದರಿಂದ ಅವರ ಕಾದಂಬರಿಗಳೆಂತೋ, ಭಾಷೆಯನ್ನು ಅಂತೆಯೇ ವರ್ಗೀಕರಿಸಬಹುದು.

ಕುವೆಂಪುರವರು ಒಂದೇ ಭೌಗೋಳಿಕ ಸನ್ನಿವೇಶದಲ್ಲಿ ವಾಸಮಾಡುವ ವಿವಿಧ ಜಾತಿಯ ಜನ ತಮ್ಮ ಪ್ರಜ್ಞೆಯ ಆಧಾರದ ಮೇಲೆ ಭಿನ್ನವಾದ ಗ್ರಾಮ್ಯತೆಯನ್ನು ರೂಢಿಸಿಕೊಂಡಿರುತ್ತಾರೆ ಂಬುದನ್ನು ಗುರುತಿಸುತ್ತಾರೆ. ಜಾತೀಯತೆಯ ಪ್ರಭಾವ ಭಾಷೆಯ ಮೇಲೂ ಆಗಿರುವುದನ್ನು ಗಮನಿಸಬಹುದು. ಮಲೆನಾಡಿನ ಬದುಕಿನ ಸ್ವರೂಪವನ್ನರಿಯಲು ಅಲ್ಲಿಯ ನಂಬಿಕೆ, ನಡಾವಳಿ ವೇಷ-ಭೂಷಣಗಳು ಎಷ್ಟು ಮುಖ್ಯವೋ, ಭಾಷೆಯೂ ಅಷ್ಟೇ ಮುಖ್ಯ.

ಕಾದಂಬರಿಯಲ್ಲಿ ಬರುವ ಗುತ್ತಿ ಮತ್ತು ತಿಮ್ಮಿ ದಲಿತ ವರ್ಗಕ್ಕೆ ಸೇರಿದವರು. ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ತರದಲ್ಲಿರುವವರು. ಇವರ ಭಾಷೆ ಪ್ರಕೃತಿಗೆ ಹತ್ತಿರವಾದುದು. ನಾಗರಿಕತೆಯ ಸೋಂಕು ತಟ್ಟುವುದಿಲ್ಲ. ಅವರ ಮುಗ್ಧತೆ, ಕಪಟವಿಲ್ಲದ ಮನಸ್ಸು, ನಿರ್ಮಲ ಪ್ರೇಮ ಮಲೆನಾಡಿನ ಕಾಡಿನಷ್ಟೆ ದಟ್ಟವಾದುದು. ಗುತ್ತಿ-ತಿಮ್ಮಿಯರ ಸಂಭಾಷಣೆಯ ನಿದರ್ಶನ ಇಲ್ಲಿದೆ.

"ಇಲ್ಲಿ ನೋಡ್ದೇನು, ಏನಿದೆ ಅಂತಾ?" ಎಂದು ತನ್ನ ಎಡದ ತೋಳನ್ನು ಚಾಚಿ ಅದಕ್ಕೆ ಕಟ್ಟಿದ್ದ ತಾಯಿತ ತೋರಿಸುತ್ತಾ ಹಂಗಿಸಿದನು. "ಅಣ್ಣಾ ಪಂಡಿತರು ಕೊಟ್ಟಿದ್ದು ಕಣೇ, ಅಂತ್ರ! ಎಂಥಾ ಒಲ್ಲೆ ಅನ್ನೋ ಹೆಣ್ಣನ್ನಾದ್ರೂ ಒಲಿಯೋ ಹಾಂಗೆ ಮಾಡ್ತದಂತೆ. ಅಲ್ಲದಿದ್ರೆ ನನ್ನ ಸಂಗಡ ನೀ ಇಷ್ಟು ಸುಲಭಕ್ಕೆ ಓಡಿ ಬರ್ತಿದ್ಯಾ! ಚುಟಿಗಿ ಹಾಕಿ ಕರೆದ್ರೆ ನಾಯಿ ಬರಹಂಗೆ".

"ನಿಂಗೊಬ್ಬನಿಗೆ ಅಂತಾ ಮಾಡಿಯೇನೂ? ಅವನಿಗೂ ಕೊಟ್ಟಾರೆ ಅವರು?"

ಯಾರಿಗೆ ಬೆಚ್ಚಿ ಕೇಳಿದನು, ಸ್ವಲ್ಪ ಅಪ್ರತಿಭನಾದಂತೆ,

"ಯಾರಿಗೆ? ಅವನಿಗೇ! ಆ ಬಚ್ಚಗೆ" ಗೆದ್ದದನಿಯಿಂದ ಹೇಳಿದಳು ಸೋತವನಿಗೆಂಬಂತೆ

"ಅವನಿಗೂ ಹಿಂಗೇ ಅಂತ್ರಾ ಕೊಟ್ಟಾರಾ? ಕಣ್ಣಾ ಪಂಡಿತ್ರು?" ಬೆಪ್ಪಾಗಿತ್ತು ಗುತ್ತಿಯ ದನಿ.

"ಹ್ಞೂಂ ಮತ್ತೆ! ನಿನ್ಹ್ಯಾಂಗೆ ಅವನೂ ತೋರಿಸಿದ್ದ ನಂಗೆ !"೧

ಭಾಷೆಯ ದುಡಿಮೆ ಈ ಪಾತ್ರಗಳ ಅಂತರಂಗ ಚಿತ್ರವನ್ನು ಎತ್ತಿ ಹಿಡಿಯುತ್ತದೆ.

ಹಾಗೆಯೇ ಗುತ್ತಿ-ತಿಮ್ಮಿಯರಿಗಿಂತ ಸಾಮಾಜಿಕವಾಗಿ ಸ್ವಲ್ಪ ಮೇಲಿನ ಸ್ತರದಲ್ಲಿರುವ ಐತ-ಪೀಂಚಲು ಸಂದರ್ಭದಲ್ಲಿ ಭಾಷೆ ಭಿನ್ನ ಸ್ತರದಲ್ಲಿ ಕೆಲಸ ಮಾಡುತ್ತದೆ. ಐತ-ಪೀಂಚಲುವಿನ ಗಾಢ ಪ್ರೇಮವನ್ನು ಕಂಡು ಸಹಿಸದ ಕೆಲವರ ಅಸೂಯೆಯ ಮಾತುಗಳನ್ನು ಕೇಳಿದ ಐತನಿಗೆ ಒಂದು ಕ್ಷಣ ಮನಸ್ಸು ವಿಚಲಿತವಾಗುತ್ತದೆ. ತಿಮ್ಮಿ ಬಚ್ಚನ ವಿಷಯ ಪ್ರಸ್ತಾಪಿಸಿದಾಗ ಗುತ್ತಿ ಸ್ಥಿತಪ್ರಜ್ಞನಾಗುತ್ತಾನೆ. ಆದರೆ ಚೀಂಕ್ರನ ಮಾತು ಕೇಳಿ ಪೀಂಚಲುವನ್ನು ಐತ ಅನುಮಾನಿಸುವ ಸಂದರ್ಭ ಹೀಗಿದೆ.

"ಹೊಸ ಸೀರೆ ಎಲ್ಲಿತ್ತೇ? ಯಾರು ಕೊಟ್ಟಿದ್ದೆ?"

"ಎಲ್ಲಿಯೋ ಇತ್ತು ಯಾರೋ ಕೊಟ್ಟರು".

"ಇದೆಲ್ಲ ತಿನ್ನಾಕೆ ತಂದೀಯಲ್ಲ ಯಾರು ಕೊಟ್ಟದ್ದು?"

"ಯಾರೋ ಕೊಟ್ಟರು ಅದೆಲ್ಲ ಈಗ ಯಾಕೆ?"

"ಹೂ ಮುಡಿದಿದ್ದೀಯಾ?"

"ಮುಡೀಬಾರದಾ?"

"ನಾ ಊಟ ಮಾಡಾದಿಲ್ಲ."೨

ಸಾಮಾಜಿಕವಾಗಿ ಮೇಲುಸ್ತರಕ್ಕೆ ಹೋದಂತೆ ಭಾಷೆಯು ಸಂಸ್ಕಾರಗೊಳ್ಳುವುದಲ್ಲದೆ ಕೌಟುಂಬಿಕ ಪರಿಸರವೂ ಭಿನ್ನವಾಗುತ್ತಾ ಮಡಿವಂತಿಕೆಯ ರೂಪ ಪಡೆಯುತ್ತದೆ.

ಕೇರಳದಿಂದ ಬಂದು ನಾಟೀವೈದ್ಯ ನಡೆಸುತ್ತಿರುವ ಕಣ್ಣಾಪಂಡಿತರ ಭಾಷೆ ಹೀಗಿದೆ.

"ಏನೋ ಕುತ್ತಿ, ಮತುವೆ ಮಕನ ಹಾಂಗೆ ಬಟ್ಟೆಯುಟ್ಟು ಹೊರಟಿದ್ದೀಯಲ್ಲವೋ?"೩

ಇಲ್ಲಿ ಕನ್ನಡ ಭಾಷಾ ಪ್ರಯೋಗದಲ್ಲಿ ಮಲೆಯಾಳಿ ಭಾಷೆಯ ಪ್ರಭಾವವಿರುವುದನ್ನು ಕಾಣಬಹುದು. 'ಗ'ಕಾರ 'ಕ'ಕಾರವಾಗಿರುವುದು 'ದ'ಕಾರ 'ತ'ಕಾರವಾಗಿರುವುದು ಕಣ್ಣಾ ಪಂಡಿತರ ಭಾಷೆಯಲ್ಲಿ ಎದ್ದು ಕಾಣುತ್ತದೆ.

ಕಾದಂಬರಿಯಲ್ಲಿ ಬರುವ ಮುಸಲ್ಮಾನರ ಭಾಷೆ ಇನ್ನಷ್ಟು ಭಿನ್ನ. ಇವರ ಮಾತುಗಳಲ್ಲಿ ಅವಾಚ್ಯ ಅಶ್ಲೀಲ ಪದಗಳು ಸಹಜವಾಗಿ ಬಳಕೆಗೊಂಡಿವೆ.

ನಾನು ಯಾವನು ಅಂದರೆ ನಿನ್ನ ಜುಟ್ಟು ಹಿಡಿದು ಎಳೆದುಕೊಂಡು ಹೋಗುವ ವಸೂಲಿ ಸಾಹೇಬ!

"ಸಾಹೇಬನಂತೆ ಸಾಹೇಬ! ದನಾ ತಿನ್ನಾ ಮುಂಡೇಗಂಡ ನಿನಗೆಷ್ಟೋ ದೌಲತ್ತು?"

"ಏನು ಗಂಡ ಗಿಂಡ ಅಂತೀಯ, ಬಾನ್‌ಚತ್ ಬೋಳೀಮಗನೇ? ಹಲ್ಲು ಹುದುರಿಸಿ ಬಿಟ್ಟೇನು ಹುಷಾರ್."

"ಚಲ್ಲಣದಾಗೆ ಹೇತುಕೊಳ್ಳೋ ಹಾಗೆ ಮಾಡ್ತೀನಿ ನೋಡು ನಿನಗೆ; ಸೂವರ್ ಸೂಳೆ ಮಗನೆ!" ಪುಟ್ಟಾಚಾರಿ ಕೈಯಲ್ಲಿ ಹಿಡಿದಿದ್ದ ಕಬ್ಬಿಣದ ಸುತ್ತಿಗೆಯೊಡನೆ ಮೇಲೆದ್ದನು.

"ಸೂವರ್ ಗಿವರ್ ಅಂತೀಯೇನೋ ಮಾದರ್‌ಚತ್? ನಿನ್ನ ಜಾತಿನೆಲ್ಲಾ ಕೆಡಿಸಿ ಬಿಡ್ತೀನಿ ನೋಡು ಮೊಖಕ್ಕೆ ಉಗಿದು!.... ಹ್ಯಾಕ್ ಥೂ!" ಇಜಾರದ ಸಾಬಿ ಪುಟ್ಟಾಚಾರಿಯ ಕಡೆಗೆ ಉಗಿದುಬಿಟ್ಟನು."೪

ಮಲೆನಾಡಿನ ಬದುಕಿನಲ್ಲಿ ವಿವಿಧ ಸ್ತರಗಳಲ್ಲಿ ಇರುವ ಎಲ್ಲ ಬಗೆಯ ಭಾಷೆಯನ್ನು ಕುವೆಂಪು ದುಡಿಸಿಕೊಳ್ಳುವುದರಿಂದ ಕಾದಂಬರಿಯ ಭಾಷೆಗೊಂದು ವೈವಿಧ್ಯತೆ ಬಂದಿರುವಂತೆಯೇ ಅಲ್ಲಿನ ಬದುಕಿನ ವೈವಿಧ್ಯವೂ ಚಿತ್ರಣಗೊಂಡಿದೆ.

ಈ ಕಾದಂಬರಿಯಲ್ಲಿ ಕೆಳವರ್ಗದ ಜನರ ಸಂಭಾಷಣೆಯಲ್ಲಿ ಬರುವ ಪದಗಳನ್ನು ಗ್ರಂಥಸ್ಥ ಭಾಷೆಯ ಪದಗಳೊಡನೆ ಹೋಲಿಸಿದಾಗ ವಿಚಾರಣೆಯಲ್ಲಿ ಅಸ್ಪಷ್ಟತೆ ಕಂಡುಬರುತ್ತದೆ.

ಉದಾ: ಪ್ರಾಂತ>ಪರಾಂತ್ಯ, ಪ್ರಾಯ>ಪರಾಯ, ಬ್ರಾಹ್ಮಣರು ಬಿರಾಂಬ್ರು,ಗ್ರಹಚಾರ> ಗಿರಾಚಾರ, ಹೋದರು>ಹ್ವಾದ್ರು ಮದುವಣಿಗ >ಮದುವಳಿಗ, ವ್ಯವಹಾರ>ಯವಾರ, ತಮಾಷೆ> ತಮಾಸೆ ಇತ್ಯಾದಿ.

ಜಾತಿ ವ್ಯವಸ್ಥೆಯ ತರತಮಗಳು ಭಾಷೆಯ ನೆಲೆಯಲ್ಲೂ ಸಾಮಾಜಿಕ ಅಂತರವನ್ನು ನಿರಂತರವಾಗಿ ಕಾಪಾಡಿವ ಬಗೆಯನ್ನೂ ಕಾದಂಬರಿ ಅನೇಕ ಸ್ವಾರಸ್ಯಕರ ನಿದರ್ಶನಗಳಲ್ಲಿ ದಾಖಲು ಮಾಡುತ್ತವೆ. ಹೆಂಡತಿಯು ನಪುಂಸಕ ಲಿಂಗದಲ್ಲಿ ನಿರ್ದೇಶಿತವಾಗುವ ಹಲವು ಉದಾಹರಣೆಗಳನ್ನು ಲೇಖಕರು ಗಮನಿಸಿದ್ದಾರೆ. ಹೆಚ್ಚೆಂದರೆ ಸ್ತ್ರೀಲಿಂಗ ಏಕ ವಚನದ ಗೌರವ ಮಾತ್ರ ಹೆಂಡತಿಗೆ. ಹೆಂಡತಿ ಇಲ್ಲಿ ಅವಳು, ಗಂಡ ಮಾತ್ರ ಅವರು. ಜಾತಿ ಶ್ರೇಣೀಕರಣದ ಕೆಳಕೆಳಗೆ ಬಂದಂತೆ ಅವರು ಕೆಲವೊಮ್ಮೆ ಅವನು ಆಗುವುದುಂಟು.

ಒಂದೇ ಜಾತಿಯೊಳಗೆ ದೊಡ್ಡವರಿಗೆ ಬಹುವಚನ, ಚಿಕ್ಕವರಿಗೆ ಏಕವಚನ ಸಾಧಾರಣವಾಗಿ ಬಳಕೆಯಾಗುತ್ತದೆ. ಸಂಬಂಧಗಳು ಆಪ್ತವಾಗುತ್ತ ಬಹುವಚನವು ಏಕವಚನದತ್ತ ಚಲಿಸುತ್ತದೆ. ಆದರೆ ತನಗಿಂತ ಮೇಲ್ಜಾತಿಯವರೊಂದಿಗೆ ವ್ಯವಹರಿಸುವಾಗ ವಯಸ್ಸು ಏನೇ ಇರಲಿ ಬಹುವಚನ ಹೆಚ್ಚು ಕಡಿಮೆ ಕಡ್ಡಾಯ. ತನಗಿಂತ ಕೆಳಜಾತಿಯವರೊಂದಿಗೆ ವ್ಯವಹರಿಸುವಾಗ ಏಕವಚನದ ಬಳಕೆ ಸರ್ವೇ ಸಾಮಾನ್ಯ.. ವಯಸ್ಸಿನ ಅಂತರ ಏನೇ ಇದ್ದರೂ ಏಕವಚನದ ಬಳಕೆ ಸಹಜ!. ತನಗಿಂತ ಕೆಳ ಜಾತಿಯವನು ತನಗಿಂತ ಮೇಲ್ವರ್ಗದವನಾಗಿದ್ದರೆ, ಅಂದರೆ ಶ್ರೀಮಂತನಾಗಿದ್ದರೆ, ಸಮಯ ಸಂದರ್ಭಕ್ಕೆ ತಕ್ಕಂತೆ ವಚನದ ಬಳಕೆ ಹಿಂದೆ ಮುಂದಾಗಬಹುದಾಗಿತ್ತು.

ಅಡಿ ಟಿಪ್ಪಣಿಗಳು:

೧. ಕುವೆಂಪು: ಮಲೆಗಳಲ್ಲಿ ಮದುಮಗಳು ಪು.ಸಂ.೨೧೫
೨. ಆದೇ ಪು.ಸಂ.೧೭೬
೩. ಆದೇ ಪು.ಸಂ.೨೮
೪. ಆದೇ ಪು.ಸಂ.

# ೧೦. ಕಾದಂಬರಿಯಲ್ಲಿ ಮತಾಂತರ ಪ್ರಕ್ರಿಯೆ

ಹತ್ತೊಂಭತ್ತು ಮತ್ತು ಇಪ್ಪತ್ತನೇ ಶತಮಾನದ ಭಾರತದ ಸಾಂಸ್ಕೃತಿಕ ಬದುಕು ವಸಾಹತು ಸಂದರ್ಭದಲ್ಲಿ ಹಲವು ಬಗೆಯ ಸ್ಥಿತ್ಯಂತರಗಳಿಗೆ ಗುರಿಯಾಗಿದೆ. ಇದು ನಮ್ಮ ಸಾಮಾಜಿಕ, ರಾಜಕೀಯ, ಧಾರ್ಮಿಕ, ಶೈಕ್ಷಣಿಕ ಹಾಗೂ ವೆಷ್ಟಿ ಮತ್ತು ಸಮಷ್ಟಿ ಬದುಕಿನಲ್ಲಿ ಹೊಸ ವಿಚಾರ ಮತ್ತು ಆಲೋಚನೆಗಳ ಗಾಳಿ ಬೀಸ ತೊಡಗಿ ಅನೇಕ ಬದಲಾವಣೆಗಳಿಗೆ ಅವಕಾಶ ಮಾಡಿಕೊಟ್ಟಿತು.

'ಮಲೆಗಳಲ್ಲಿ ಮದುಮಗಳು' ಕಾದಂಬರಿಯೂ ವಸಾಹತು ಅನುಭವವನ್ನು ಅಗಾಧವಾಗಿ ಹೊಂದಿದೆ. ಮಲೆಗಳಲ್ಲಿ ಮದುಮಗಳು ಕಾದಂಬರಿಯೂ ರಚನೆಯಾದದ್ದು ಸ್ವಾತಂತ್ರ್ಯಾ ನಂತರವಾದರೂ, ಇಡೀ ಕಥನ ನಡೆಯುವುದು ವಸಾಹತು ಸಂಸ್ಕೃತಿ ಪ್ರಾದೇಶಿಕ ಹಾಗೂ ರಾಷ್ಟ್ರೀಯ ಬದುಕಿನಲ್ಲಿ ನೆಲೆಯೂರುತ್ತಿದ್ದ ಸಂದರ್ಭದಲ್ಲಿ. ಈ ವಸಾಹತು ಸಂಸ್ಕೃತಿಯ ಪ್ರಭಾವದಿಂದ ಸ್ಕೂಲು, ಆಸ್ಪತ್ರೆ, ಬೈಸಿಕಲ್ಲು, ಲಾಟೀನು, ಬೈಬಲ್ ಮಲೆನಾಡನ್ನು ಪ್ರವೇಶಿಸಿ ಜನರಲ್ಲಿ ಅಚ್ಚರಿಯನ್ನು ಮೂಡಿಸಿದ ಪರಿಯನ್ನು ಕಾದಂಬರಿಕಾರರು ಚಿತ್ರಿಸುತ್ತಾರೆ.

ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿ ಮತಾಂತರದ ಪ್ರಕ್ರಿಯೆ ಅತ್ಯಂತ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದೆ. ಈ ಮತಾಂತರ ಪ್ರಕ್ರಿಯೆಯ ಮುಖ್ಯ ಧ್ಯೇಯ ಧರ್ಮ ಮತ್ತು ರಾಜಕೀಯ ಯಂತ್ರವನ್ನು ಭದ್ರವಾಗಿ ನೆಲೆಗೊಳ್ಳುವಂತೆ ಮಾಡುವುದು. ಅಂದರೆ ತಮ್ಮ ಧರ್ಮೀಯರ ಸಂಖ್ಯೆಯನ್ನು ಹೆಚ್ಚಿಸುವುದು ಹಾಗೂ ರಾಜಕೀಯ ಪ್ರಾಬಲ್ಯವನ್ನು ಗಟ್ಟಿಗೊಳಿಸಿಕೊಳ್ಳುವ ರಾಜಕೀಯ ಹುನ್ನಾರ. ಈ ಬಗೆಯ ಮತಾಂತರ ಪ್ರಕ್ರಿಯೆ ಬಲತ್ಕಾರ ಅಸಂಖ್ಯ. ಆಮಿಷಗಳನ್ನು ಆಧಾರವಾಗಿಟ್ಟುಕೊಂಡು ತಮ್ಮ ಉದ್ದೇಶ ಸಾಧನೆ ಮಾಡಿಕೊಳ್ಳುತ್ತದೆ.

ಮತಾಂತರಕ್ಕೆ ಪೂರಕವಾದ ವಾತಾವರಣ ಅಂದಿನ ಭಾರತೀಯ ಸಮಾಜದಲ್ಲಿತ್ತು. ಹಿಂದೂ ಧರ್ಮದಲ್ಲಿನ ಪುರೋಹಿತಷಾಹಿಗಳ ಅಮಾನವೀಯ ಮೌಲ್ಯ. ಕಂದಾಚಾರ, ಮೂಢನಂಬಿಕೆಗಳನ್ನು ಶೂದ್ರರ ಮೇಲೆ ಹೇರುವ ಮೂಲಕ ಶೂದ್ರರ ಶೋಷಣೆ ನಿರಂತರವಾಗಿ ಕಂಡು ಬಂದುದರಿಂದ ಶೋಷಣೆಗೆ ಒಳಗಾದ ಜನ ಅನ್ಯಮತ ಸ್ವೀಕರಣೆ ಮಾಡುವುದರ ಮೂಲಕ ತಮ್ಮ ಬದುಕನ್ನು ಸುಧಾರಿಸಿಕೊಳ್ಳುವ ಮನೋಭಾವವನ್ನು ತಳೆದರು.

ಶೋಷಣೆಗೆ ಒಳಗಾದ ಜನರ ಈ ಬಗೆಯ ಸುಧಾರಣಾ ಆಕಾಂಕ್ಷೆಗೆ ಸಮಾಜದ ಕೆಲವು ಗಣ್ಯ ವ್ಯಕ್ತಿಗಳು ಬೆಂಬಲ ಸೂಚಿಸಿ ಮತಾಂತರಕ್ಕೆ ಕರೆಕೊಟ್ಟರು. ಅವರಲ್ಲಿ ಪ್ರಮುಖರು ಸ್ವತಃ ಅಸ್ಪೃಶ್ಯರಾಗಿ ಜೀವನದಲ್ಲಿ ನೋವು ಮತ್ತು ಅವಮಾನಕ್ಕೆ ಗುರಿಯಾಗಿ ಜಾತಿ ಮತ್ತು ಅಸ್ಪೃಶ್ಯತೆಯನ್ನು ಕಟುವಾಗಿ ಟೀಕಿಸಿ ದಲಿತರ ಉದ್ದಾರಕ್ಕೆ ಹೋರಾಡಿದ ಅಂಬೇಡ್ಕರ್. ಇವರು ಮತಾಂತರ ಪ್ರಕ್ರಿಯೆಗೆ ಬೆಂಬಲ ಸೂಚಿಸಿ ೧೫-೧೦-೧೯೩೫ ರಂದು ಮತಾಂತರ ಹೊಂದುವುದಾಗಿ ಘೋಷಿಸಿ "ವಿಷಮತೆ ಹಿಂದೂ ಧರ್ಮದ ಅಡಿಪಾಯ, ಹಿಂದೂ ಧರ್ಮದಲ್ಲಿ ಹಿಂದುಳಿದವರು ಪ್ರಗತಿಯಾಗಲು ಸಾಧ್ಯವಿಲ್ಲ. ಒಳ್ಳೆಯ ನಡತೆ ಮತ್ತು ವಿಚಾರಗಳಿಗೆ ಹಿಂದೂ ಧರ್ಮ ಸ್ಫೂರ್ತಿ ನೀಡುವುದಿಲ್ಲ. ಆದ್ದರಿಂದ ಆ ಧರ್ಮವನ್ನು ಇದೇ ಸಂದರ್ಭದಲ್ಲಿ ಬಿಡುವುದೇ ಲೇಸು"[೧] ಎಂದು ಅಂಬೇಡ್ಕರ್ ಬೌದ್ಧ ಧರ್ಮಕ್ಕೆ ಮತಾಂತರಗೊಂಡರು.

ಆದರೆ ಅನೇಕರು ಈ ಮತಾಂತರವನ್ನು ಕಟುವಾಗಿ ಟೀಕಿಸಿದರು. ಏಕೆಂದರೆ ಮತಾಂತರವು ಶೋಷಣೆಗೊಳಗಾದ ಜನರು ಒಂದು ಧರ್ಮದ ಶೋಷಣೆಯಿಂದ ಪಾರಾಗಿ ಮತ್ತೊಂದು ಧರ್ಮದ ಶೋಷಣೆಗೆ ಒಳಪಡಿಸುವ ಪ್ರಕ್ರಿಯೆ ಎಂಬ ಕಾರಣಕ್ಕೆ ಕೆಲವರು ಮತಾಂತರವನ್ನು ವಿರೋಧಿಸಿದರೆ ಮತ್ತೆ ಕೆಲವರು ಮತಾಂತರವು ಹಿಂದೂ ಧರ್ಮದ ಅಸ್ತಿತ್ವಕ್ಕೆ ಕೊಡಲಿಪೆಟ್ಟನ್ನು ನೀಡುತ್ತದೆಂಬ ಕಾರಣಕ್ಕಾಗಿ ವಿರೋಧಿಸಿದರು. ಗಾಂಧೀಜಿಯವರು ಅಂಬೇಡ್ಕರ್‌ರ ಮತಾಂತರವನ್ನು ಖಂಡಿಸುತ್ತಾ, "ಧರ್ಮವೆಂದರೆ ಮನುಷ್ಯನ ಮೈಮೇಲಿನ ಬಟ್ಟೆಯಲ್ಲ ಹಾಗೂ ಯಾರೂ ಯಾವಾಗ ಬೇಕಾದರೂ ಅದನ್ನು ಬದಲಾಯಿಸಲು ಸಾಧ್ಯವಿಲ್ಲ"೨ ಎನ್ನುತ್ತಾರೆ.

ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯು ಮತಾಂತರ ಪ್ರಕ್ರಿಯೆಯ ದೃಷ್ಟಿಯಿಂದ ಚಾರಿತ್ರಿಕವೂ, ಸಾಂಸ್ಕೃತಿಕವೂ ಆಗಿದೆ. ಮತಾಂತರ ಪ್ರಕ್ರಿಯೆಯ ಬಗೆಗೆ ನಿರೂಪಕನ ನಿಲುವುಗಳು ನೇರವಾಗಿಯೇ ನಿಚ್ಚಳವಾಗಿಯೇ ಇಲ್ಲಿ ಕಾಣಿಸುತ್ತದೆ. ಭಾರತೀಯ ಮತ್ತು ಪಾಶ್ಚಾತ್ಯ ಪುರೋಹಿತಶಾಹಿಯ ಎರಡು ಧೋರಣೆಗಳ ಬಗೆಗೂ ಕಟಕಿ, ವ್ಯಂಗ್ಯ ಕಾಣಿಸುತ್ತದೆ. ಸ್ಥಳೀಯ ಪುರೋಹಿತಶಾಹಿಯು ಕೆಳವರ್ಗದ ಮೇಲೆ ತಾನು ಸ್ಥಾಪಿಸಿದ ಯಾಜಮಾನ್ಯದ ಕಾರ್ಯದಿಂದ ಬೇಸತ್ತ ಪ್ರಜ್ಞೆಯೊಂದು ಮತಾಂತರಗೊಳ್ಳಲು ದ್ವಂದ್ವದ ನೆಲೆಯಲ್ಲಿ ಸಿಕ್ಕಿಕೊಂಡಿರುವ ದುರಂತವನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ಕಾದಂಬರಿಯಲ್ಲಿ ಮತಾಂತರದ ಹಿಂದಿರುವ ಹುನ್ನಾರಗಳ ಬಗೆಗೆ ಕಟು ವಿಮರ್ಶೆ ಇದ್ದಂತೆ, ಸ್ಥಳೀಯ ಧಾರ್ಮಿಕ ಸಂಸ್ಥೆಗಳ ಬಗೆಗೂ ತೀವ್ರ ಖಂಡನೆ ಇದೆ. ಜೀವರತ್ನಯ್ಯನ ಉಪದೇಶ ಮತ್ತು ಆಮಿಷಗಳು ಫಲಕಾರಿಯಾಗಲು ಮುಖ್ಯ ಕಾರಣ ಹಿಂದೂ ಧರ್ಮದಲ್ಲಿನ ಪುರೋಹಿತಷಾಹಿಯ ಅಮಾನವೀಯ ಮೌಲ್ಯಗಳೇ. ಹಿಂದೂ ಧರ್ಮದ ಅನಾಚಾರ, ಅವಿವೇಕ, ಸಂಕುಚಿತ ಮನೋಭಾವ, ಜಾತಿಮತ ಪಕ್ಷಪಾತ, ಬ್ರಾಹ್ಮಣರ ತಿರಸ್ಕಾರ, ಶೂದ್ರರ ದೈನ್ಯ, ಅಧೋಗತಿ ಕಲ್ಲು, ಮಣ್ಣು, ಮರ, ದೈವಗಳ ಪೂಜೆ ಇತ್ಯಾದಿಗಳನ್ನು ಕ್ರೈಸ್ತ ಮತದ ಪರೋಪಕಾರ ಪರಾನುಕಂಪದ ರೀತಿ, ತ್ಯಾಗಭಕ್ತಿ, ಉದ್ಧಾರಕ ಸಾಮರ್ಥ್ಯಗಳನ್ನು ಹೀಗೆ ಪುರೋಹಿತಶಾಹಿಯ ಅಮಾನವೀಯತೆ ಮತ್ತು ಕ್ರೈಸ್ತಧರ್ಮದ ಹುನ್ನಾರಗಳು ನಮ್ಮ ಗಮನಕ್ಕೆ ಬರುತ್ತವೆ.

ಹಿಂದೂ ಧರ್ಮದಲ್ಲಿ ಮೇಲ್ವರ್ಗವು ತನ್ನ ಸೇವಾಕಾರ್ಯಗಳಲ್ಲಿ ಶೂದ್ರರನ್ನು ದುಡಿಸಿಕೊಳ್ಳುವ ಸಲುವಾಗಿಯೇ ಶೂದ್ರರಲ್ಲಿ ಮೌಢ್ಯ ವಿಚಾರಗಳನ್ನು ತುಂಬಿದುದು ಕಾದಂಬರಿಯಲ್ಲಿ ವೇದ್ಯವಾಗುತ್ತದೆ.

"ಅಜ್ಞರೂ ಮೌಢ್ಯಾಂಧರೂ ಆಗಿದ್ದ ಶೂದ್ರವರ್ಗದ ಸಾಮಾನ್ಯ ಜನರಿಂದ ಪಾದಪೂಜೆ ಮಾಡಿಸಿಕೊಳ್ಳುತ್ತಿದ್ದರು. ಅಡ್ಡಪಲ್ಲಕ್ಕಿ ಸೇವೆ ಸಲ್ಲಿಸಿಕೊಳ್ಳುತ್ತಿದ್ದರು. ದಾನ, ದಕ್ಷಿಣೆ, ಸಾಷ್ಟಾಂಗ ನಮಸ್ಕಾರಗಳನ್ನು ಸ್ವೀಕರಿಸುತ್ತಿದ್ದರು. ಆಶೀರ್ವಾದ ಮಾಡುತ್ತಿದ್ದರು.! ತಮ್ಮ ತಮ್ಮ ಪಂಗಡಕ್ಕೆ ಸೇರಿದ ಬ್ರಾಹ್ಮಣೋತ್ತಮರಿಗೆ, ಭೂಸುರರಿಗೆ, ಸಮಾರಾಧನೆ ಮಾಡಿಸಿ ಹೊಟ್ಟೆ ತುಂಬಿಸುತ್ತಿದ್ದರು. ಬಹುಶಃ ಶಾಸ್ತ್ರಕ್ಕಾಗಿ, ತಮ್ಮ ವರ್ಗಕ್ಕೆ ಸೇರಿದ ವಿದ್ವಾಂಸರನ್ನು ನೆರಪಿ ವಾಕ್ಯಾರ್ಥ ಏರ್ಪಡಿಸುತ್ತಿದ್ದರೂ ಇರಬಹುದು. ಶೂದ್ರರು ವೇದೋಪನಿಷತ್ತುಗಳನ್ನು ಓದುವುದಿರಲಿ, ಕೇಳಿದರೂ ಅವರ ಕಿವಿಗೆ ಸೀಸ ಕರಗಿಸಿ ಹೊಯ್ಯುವ ನರಕ ಶಿಕ್ಷೆಯನ್ನು ವಿಧಿಸಿ, ಅದಕ್ಕೆ ಧರ್ಮಶಾಸ್ತ್ರವೆಂದು ಹೆಸರಿಟ್ಟರು. ಶೂದ್ರರಿಗೆ ವೇದಾಂತ ಬೋಧನೆ ಮಾಡುವ ಪಾಪಕ್ಕೆ ಏಕೆ ಪಕ್ಕಾಗುತ್ತಾರೆ?"೩

ಅಂದರೆ ಶೂದ್ರನೊಬ್ಬ ಶಿಕ್ಷಣ ಪಡೆಯುವುದು ಮಹಾಪಾಪ ಎಂಬ ಧೋರಣೆಯನ್ನು ಶೂದ್ರರಲ್ಲಿ ಬಿತ್ತಿ, ಶಿಕ್ಷಣದಿಂದ ವಂಚಿತರನ್ನಾಗಿ ಮಡಲು ಶಾಸ್ತ್ರಗಳನ್ನು ಮುಂದಿಟ್ಟ ಪುರೋಹಿತಷಾಹಿ ವ್ಯವಸ್ಥೆಯನ್ನು ಕುವೆಂಪು ಇಲ್ಲಿ ತೀವ್ರವಾಗಿ ಪ್ರಶ್ನಿಸುತ್ತಾರೆ.

ವೇದಾಂತ ದರ್ಶನದ ಮಾನವೀಯ ಮೌಲ್ಯಗಳಾಗಲಿ, ಜ್ಞಾನವಾಗಲಿ ಇಲ್ಲದ ವರ್ಗವೊಂದು ಸನಾತನ ಕಂದಾಚಾರಗಳಲ್ಲಿ ನಂಬಿಕೆ ಇರಿಸಿ ಸ್ವಂತ ಆಲೋಚನಾ ಶಕ್ತಿಯೇ ಇಲ್ಲದ ಜಡಬುದ್ಧಿಗಳನ್ನು, ಹಳೆಯ ತಲೆಮಾರನ್ನು ಮತಾಂತರಗೊಳಿಸುವುದು ಕ್ರೈಸ್ತ ಪಾದ್ರಿ ಜೀವರತ್ನಯ್ಯನಿಗೆ ಸುಲಭವಲ್ಲ. ಆದ್ದರಿಂದ ಜಾಗೃತಮತಿಗಳಾದ ಸನಾತನ ಧರ್ಮದ ಮೂಲ ತತ್ವಗಳನ್ನು ಅರಿಯದ ಸಿಂಧುವಳ್ಳಿ ಚಿನ್ನಪ್ಪ ಮತ್ತು ಬೆಟ್ಟಳ್ಳಿ ದೇವಯ್ಯನಂತಹ ಯುವಪೀಳಿಗೆಯನ್ನು ಮತಾಂತರಿಸಲು ಜೀವರತ್ನಯ್ಯ ಪ್ರಯತ್ನಿಸುತ್ತಾನೆ. ಹೊಸ ಸಂಸ್ಕೃತಿಯ ಸಂಪರ್ಕದಿಂದ ಇವರಲ್ಲಾದ ಬಾಹ್ಯ ಬದಲಾವಣೆಗಳು ಸ್ಥಳೀಯ ಪರಿಸರದಲ್ಲಿ ಆಕರ್ಷಕವೂ, ಕುತೂಹಲವೂ ಆಗಿ ಕಾಣುತ್ತದೆ.

ಕಾದಂಬರಿಯಲ್ಲಿ ಭಿನ್ನ ಧರ್ಮೀಯರನ್ನು ಕೀಳಾಗಿ ಚಿತ್ರಿಸಲಾಗಿದೆ. ಪಾದ್ರಿ ಜೀವರತ್ನಯ್ಯ ಬೆಟ್ಟಳ್ಳಿ ಮನೆಗೆ ಬಂದಾಗ ಬೆಟ್ಟಳ್ಳಿ ಮನೆಯವರು ಪಾದ್ರಿಯನ್ನು ತನ್ನ ಧರ್ಮದ ಅತ್ಯಂತ ಕೆಳಸ್ತರದವನಿಗಿಂತಲೂ, ಅಸ್ಪೃಶ್ಯರಿಗಿಂತಲೂ ಅನ್ಯ ಧರ್ಮೀಯನನ್ನು ಕಡೆಯಾಗಿ ಕಾಣುತ್ತಾರೆ. ಊಟಕ್ಕೆ ಹಾಕುವ ಸನ್ನಿವೇಶದಲ್ಲಿ ಕಿಲಸ್ತರ ಪಾದ್ರಿಯನ್ನು ಊಟಕ್ಕೆ ಕೂರಿಸುವ ಸ್ಥಳದ ಬಗ್ಗೆ ಹಾಗೂ ಬಾಳೆ ಎಲೆ ಹಾಕುವಾಗ, ಕೀತು ಹಾಕಬೇಕೋ, ಕುಡಿ ಹಾಕಬೇಕೋ, ಕಂಡು ಹಾಕಬೇಕೋ ಎಂಬ ವಿಚಾರಗಳ ಜಿಜ್ಞಾಸೆಯಲ್ಲಿಯೂ ಅನ್ನವನ್ನು ಯಾರು ಬಡಿಸಬೇಕೆಂಬ ವಿಚಾರದ ಸಮಸ್ಯೆಯಲ್ಲಿಯೂ ಜಾತಿ ಕೆಡುವುದು ಮಹಾ ಅಪರಾಧವೆಂಬಂತೆ ಮಲೆನಾಡಿನ ಈ ಕೌಟುಂಬಿಕ ವಾತಾವರಣ ಪರಿಚಯಿಸುತ್ತದೆ. ಆದರೆ ಪಾದ್ರಿ ಜೀವರತ್ನಯ್ಯನ ಮೊದಲ ಭೇಟಿಯ ಸಂದರ್ಭದಲ್ಲಿ ಎದುರಾದ ಈ ಬಗೆಯ ಗೊಂದಲಗಳು, ಅವಮಾನಗಳು ಕಾಲಕ್ರಮೇಣ ಇಲ್ಲವಾಗಿ ಹೊಸ ಸಂಸ್ಕೃತಿಯೊಂದು ಹೊತ್ತು ತರುವ ಆಕರ್ಷಣೆಗಳಿಗೆ ಮತ್ತು ಅವರ ಸೇವಾ ಕಾರ್ಯಗಳಿಗೆ ಮಲೆನಾಡಿನ ಬದುಕು ಬದಲಾಗುವುದನ್ನು ಕಾಣುತ್ತೇವೆ.

ಅನ್ಯ ಧರ್ಮೀಯರನ್ನು ಅಸ್ಪೃಶ್ಯರಲ್ಲಿ ಅಸ್ಪೃಶ್ಯರನ್ನಾಗಿ ಕಾಣಲಾಗುತ್ತಿತ್ತು. ಜಾತಿಯ ಶ್ರೇಣೀಕರಣದಲ್ಲಿ ಅತ್ಯಂತ ಕೆಳಗಿದ್ದು ಅಸ್ಪೃಶ್ಯರಾಗಿ ಹಲವು ಬಗೆಯ ಶೋಷಣೆಗೆ ಒಳಗಾದವರಲ್ಲಿ ಬಚ್ಚನನ್ನು ಹೊರತು ಉಳಿದ ಯಾವ ಕೆಳವರ್ಗದ ದಲಿತ ಪಾತ್ರಗಳೂ ಮತಾಂತರವನ್ನು ಅಪೇಕ್ಷಿಸದೆ, ಖಂಡಿಸುವುದನ್ನು ಕಾದಂಬರಿಕಾರ ಚಿತ್ರಿಸಿದ್ದಾರೆ. ಮತಾಂತರ ಆಧುನಿಕ , ನಾಗರೀಕತೆಯ ಪ್ರಭಾವಕ್ಕೆ ಒಳಗಾದ ಬಚ್ಚನು ತನ್ನ ಕೇರಿಯ ಆಳು-ಕಾಳುಗಳನ್ನು ತಿರಸ್ಕಾರ, ದ್ವೇಷ, ಅಸೂಯೆಗಳಿಂದ ನೋಡುತ್ತಾನೆ. ಆದರೆ ಗುತ್ತಿ, ತಿಮ್ಮಿ, ಸೇಸಿ, ಐತ, ಪೀಂಚಲು ಮೊದಲಾದ ಪಾತ್ರಗಳು ಕ್ರೈಸ್ತ ಧರ್ಮಕ್ಕೆ ಮತಾಂತರಗೊಳ್ಳುವುದು ಮಹಾ ಅಪರಾಧವಾಗಿಯೂ, ಅಸಹ್ಯವಾಗಿಯೂ ಕಾಣಿಸುತ್ತದೆ. ದಲಿತ ಜನಾಂಗದಲ್ಲಿಯೂ ತಮ್ಮ ತಮ್ಮ ನಂಬಿಕೆ, ಆಚಾರ, ವಿಚಾರಗಳನ್ನು ಬಿಟ್ಟು ಮತ್ತೊಂದು ಧರ್ಮಕ್ಕೆ ಸೇರಲು ನಿರಾಕರಣೆ ಇದೆ. ದೊಡ್ಡಬೀರನ ಕಡೆಯವರು ಗಾಡಿ ಬಚ್ಚನಿಗೆ "ನಿನಗ್ಯಾರೋ ಹೆಣ್ಣು ಕೊಡ್ತಾರೆ? ಸಣ್ಣಗೌಡ್ರು ತಾಂವೂ ಜಾತಿ ಕೆಡೋದಲ್ಲದೆ, ನಿನ್ನೂ ಜಾತಿ ಕೆಡಿಸಾಕೆ ಹೊಲ್ಟಾರೆ! ನಮಗೆ ಇಷ್ಟಾ ಇಲ್ಲಪ್ಪಾ, ಜಾತಿ ಕೆಡಕೆ!"೪ ಎಂದು ಹೇಳುತ್ತಾರೆ.

ಸೇಸಿ, ಗುತ್ತಿ, ತಿಮ್ಮಿಯನ್ನು ತನ್ನೊಂದಿಗೆ ಕರೆದೊಯ್ಯಲು ಬಂದಾಗ "ಆ ಪಾದ್ರಿ ಜಾತಿಗೆ ಸೇರ್ತಾನೆ ಅಂತಾ ಕೇರಿಲೆಲ್ಲ ಗುಸುಗುಸು, ಜಾತಿ ಕೆಟ್ಟೋನಿಗೆ ಕೊಡಾಕೆ ಬದಲಾಗಿ ಬಾವಿಗೆ ಹಾಕಾದು ಲೇಸು"೫ ಎಂದು ಹೇಳುವುದು ಹಾಗೂ ಜಾತಿ ಬಿಟ್ಟ ಬಚ್ಚನಿಗೆ ಮಗಳನ್ನು ಕೊಡಲು ನಿಶ್ಚಯಿಸಿದ್ದೇ ತಮ್ಮ ಜಾತಿಗೆ ಮುಟ್ಟುಚಟ್ಟಾಗಿ ತಿಮ್ಮಿ ಮನೆ ಬಿಟ್ಟು ಓಡಿಹೋಗಿ ಮುಂದಿನ ಅನಾಹುತಗಳಿಗೆ ಕಾರಣವಾಯಿತು ಎಂಬ ಅವರ ನಂಬಿಕೆ, ಇವುಗಳೆಲ್ಲದರ ಹಿಂದೆ ಅನ್ಯಧರ್ಮದ ಬಗೆಗೆ ತಿರಸ್ಕಾರ, ಹಾಗೂ ಜಾತಿಯನ್ನು ಬಿಟ್ಟರೆ ತಮ್ಮ ದೈವಗಳು ಶಪಿಸಿ ಹಲವು ತೊಂದರೆಗಳನ್ನು ಎದುರಿಸಬೇಕಾಗುವುದು ಎಂಬ ಭಯ ವ್ಯಕ್ತವಾಗುತ್ತದೆ.

ಗುತ್ತಿ ಬೈಸಿಕಲ್ ಸವಾರಿ ನೋಡಲು ಹೋಗುವ ಸಂದರ್ಭದಲ್ಲಿ ಸುಬ್ಬಣಹೆಗ್ಗಡೆ ಸೈಕಲ್ ಸವಾರಿ ಮತಾಂತರಕ್ಕೆ ಪಾದ್ರಿ ರೂಪಿಸಿರುವ ಹುನ್ನಾರ ಎಂಬಂತೆ ಮಾತನಾಡಿದಾಗ ಗುತ್ತಿ "ನಾವೇನು ಅವರ ಹತ್ರ ಹೋಗ್ತಿವೇನೂ? ದೂರದಾಗೆ ನಿಂತುಕೊಂಡು ನೋಡಿ ಇತ್ತಮಖಾ ಬಂದುಬಿಡ್ತೀವಿ" ಎಂದು ಗುತ್ತಿ ತಾನೂ ತನ್ನ ಜಾತಿಯವರು ಕಿಲಸ್ತರ ಪ್ರಭಾವದಿಂದ ತಪ್ಪಿಸಿಕೊಳ್ಳುವ ರೀತಿಯನ್ನು ವಿವರಿಸಿದನು"೬. ಇಲ್ಲಿ ಗುತ್ತಿಯ ಜಾತಿನಿಷ್ಠೆ, ಯಾವುದೇ ಸಂದರ್ಭದಲ್ಲಿಯೂ ತಾವು ಮತಾಂತರ ಗೊಳ್ಳುವುದಿಲ್ಲವೆಂಬ ದೃಢ ನಿಲುವು ವ್ಯಕ್ತವಾಗುತ್ತದೆ. ಹೀಗೆ ಕೆಳಜಾತಿಯವರು ಮೇಲ್ಜಾತಿಯವರಿಂದ ನಿರಂತರ ಶೋಷಣೆಗೆ ಗುರಿಯಾದರೂ ಸಹ ಅನ್ಯಧರ್ಮ ಸ್ವೀಕಾರಕ್ಕೆ ಇಲ್ಲಿನ ಕೆಳವರ್ಗದ ಪಾತ್ರಗಳು ಮನಸ್ಸು ಮಾಡದಿರುವುದನ್ನು ಬಿಂಬಿಸುತ್ತವೆ.

ಮತಾಂತರಕ್ಕೆ ಸ್ಪಂದಿಸದೇ ಅನೇಕ ಪಾತ್ರಗಳು ಆಧುನಿಕತೆಗೆ ಬೆರಗಾಗಿ ಆ ಮೂಲಕ ಸಾಮಾಜಿಕ ಅಂತರವನ್ನು ಮರೆತ ಸನ್ನಿವೇಶ ಬೈಸಿಕಲ್ ಸವಾರಿಯ ಘಟನೆಯಲ್ಲಿ ಕಾದಂಬರಿಕಾರರು ಚಿತ್ರಿಸುತ್ತರೆ. ಬೈಸಿಕಲ್ ಅನ್ನು ನೋಡಿದಾಗ ಆಧುನಿಕ ವಸ್ತುವಿನ ಬಗೆಗಿನ ಕುತೂಹಲ, ಸಂಭ್ರಮಗಳಲ್ಲಿ ಮುಳುಗಿಹೋದ ಜನ ಸಾಮಾಜಿಕ ಅಂತರವನ್ನು ಮರೆತು ನಾ ಮುಂದು ತಾ ಮುಂದು ಎಂದು ಆಧುನಿಕ ವಸ್ತುವನ್ನು ನೋಡಲು ಮುಟ್ಟಲು ಪ್ರಯತ್ನಿಸುವ ಸನ್ನಿವೇಶ ಆಧುನಿಕತೆಯ ಸಾಮಾಜಿಕ ಹೊಸ ಸಂಬಂಧವನ್ನು ಪರಿಚಯಿಸುತ್ತದೆ. ಜನರ ನೂಕಾಟದಲ್ಲಿ ಮುಟ್ಟಬಹುದಾದವರು, ಮುಟ್ಟಬಾರದವರು ಎಂಬ ಭೇದಭಾವ ಮರೆತದ್ದು ಮಾತ್ರವಲ್ಲದೆ ಅದಕ್ಕಿಂತಲೂ ಮುಖ್ಯವಾಗಿ ಅದು ಪಾದ್ರಿಗೆ "ಮತ ಪ್ರಚಾರಕ್ಕೆ ಬೈಬಲ್ಲು ಏಸುಕ್ರಿಸ್ತನಿಗಿಂತಲೂ ಬೈಸಿಕಲ್ಲೇ ಹೆಚ್ಚು ಪ್ರಭಾವಶಾಲಿ!" ಎಂಬ ಧಾರುಣ ಸತ್ಯವೊಂದನ್ನು ಕಾಣಿಸುತ್ತದೆ.

ಮತಾಂತರವನ್ನು ಕುರಿತ ಕುವೆಂಪುರವರ ನಿಲುವುಗಳು ಅತ್ಯಂತ ಸ್ಪಷ್ಟವಾಗಿಯೇ ಕಾಣಿಸುತ್ತದೆ. ಇವರು ಪರಮಹಂಸ ಮತ್ತು ವಿವೇಕಾನಂದರ ವಿಚಾರಧಾರೆಯಿಂದ ಗಾಢ ಪ್ರಭಾವಕ್ಕೆ ಒಳಗಾದವರು. ಕ್ರೈಸ್ತ ಪಾದ್ರಿಗಳ ಮುಖಾಂತರವಾಗಿ ಮಲೆನಾಡಿಗೆ ಬರುವ ಹೊಸ ಶಾಲೆಯ ಬಗೆಗೆ, ಆ ಮೂಲಕ ಹರಿದು ಬರುವ, ಆಧುನಿಕ ಮಾನವೀಯ ವಿಚಾರಧಾರೆಗಳ ಬಗೆಗೆ ಮತ್ತು ಪುರೋಹಿತಶಾಹಿಯ ಜಾತಿಭೇದ, ಮತಾಂತರ ಮೌಢ್ಯಗಳನ್ನು ಖಂಡಿಸುವುದರ ಬಗೆಗೆ ಇರುವ ಒಲವು ಆಸ್ಥೆ ಅಗಾಧ. ಆದರೆ ಮತಾಂತರಗೊಳ್ಳುವ ಪ್ರಕ್ರಿಯೆಯ ಬಗ್ಗೆ ಕುವೆಂಪುರವರಲ್ಲಿ ನಿರಾಕರಣೆ ಇದೆ. ಕುವೆಂಪುರವರ ದೃಷ್ಟಿಯಲ್ಲಿ ಮತಾಂತರವೆಂದರೆ 'ಕಾದ ಎಣ್ಣೆಯ ಬಾಣಲಿಯಿಂದ ಉರಿಯುವ ಬೆಂಕಿಗೆ ಬಿದ್ದಂತೆ'. ಹಿಂದೂ ಧರ್ಮದಲ್ಲಿನ ಆಶ್ರಯ, ಮಾನವೀಯ ಮೌಲ್ಯಗಳ ಬಗೆಗೆ ಅವರಿಗಿರುವ ಶ್ರದ್ಧೆ ಗಾಢವಾದದ್ದು. ಆದರೆ ವೇದೋಪನಿಷತ್ತುಗಳು ಮಾನವೀಯ ಮೌಲ್ಯಗಳನ್ನು ತಿರುಚಿ ಅಮಾನವೀಯಗೊಳಿಸಿದ ಪುರೋಹಿತಶಾಹಿಯ ಧೋರಣೆಗಳನ್ನು ಕುವೆಂಪು ನಿರಂತರವಾಗಿ ಖಂಡಿಸುತ್ತಾ ಬಂದಿದ್ದಾರೆ.

ಅಡಿ ಟಿಪ್ಪಣಿಗಳು:

೧. ಪ್ರೊ॥ ದಯಾನಂದ ಮಾನೆ: ಬಾಬಾ ಸಾಹೇಬ್ ಅಂಬೇಡ್ಕರ್ ಮತ್ತು ದಲಿತ ಚಳುವಳಿ, ಪು.ಸಂ.-೨೭೦
೨. ಅದೇ, ಪು.ಸಂ.೨೭೦
೩. ಕುವೆಂಪು: ಮಲೆಗಳಲ್ಲಿ ಮದುಮಗಳು, ಪು.ಸಂ.-೧೯೭
೪. ಅದೇ, ಪು.ಸಂ.-೩೪೦
೫. ಅದೇ, ಪು.ಸಂ.-೧೬೪
೬. ಅದೇ, ಪು.ಸಂ.-೧೧೦

# ಉಪಸಂಹಾರ.

'ಮಲೆಗಳಲ್ಲಿ ಮದುಮಗಳು' ಕಾದಂಬರಿ ರೂಪುಗೊಂಡ ಕಾಲಘಟ್ಟದಲ್ಲಿ ಜಾತಿವ್ಯವಸ್ಥೆ ಇಂದಿನಷ್ಟು ಸಡಿಲವಾಗಿರಲಿಲ್ಲ. ಜಾತಿ ವ್ಯವಸ್ಥೆ ಒಂದು ಸಾಮಾಜಿಕ ಸಮಸ್ಯೆಯಾಗಿ ಭಾರತೀಯ ಸಮಾಜವನ್ನು ತನ್ನ ಕದಂಬ ಬಾಹುಗಳ ಹಿಡಿತದಲ್ಲಿಟ್ಟುಕೊಂಡಿತ್ತು. ಇಂತಹ ಸಂದರ್ಭದಲ್ಲಿ ಗಾಂಧೀಜಿ, ಪರಮಹಂಸ, ವಿವೇಕಾನಂದರು ಮೊದಲಾದ ಮಹಾನ್ ಚೇತನಗಳ ಪ್ರಭಾವಕ್ಕೆ ಒಳಗಾಗಿದ್ದ ಕುವೆಂಪು ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ, ಮನುಜಮತ, ವಿಶ್ವ-ಪಥ ಎಂಬ ಪಂಚಮಂತ್ರಗಳನ್ನು ತಮ್ಮ ಸಾಹಿತ್ಯದಲ್ಲಿ ಅಭಿವ್ಯಕ್ತಿಸುವಲ್ಲಿ ಮುಂದಾದರು. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿಯೇ ಇದು ಉತ್ತಮ ರೀತಿಯಲ್ಲಿ ರೂಪುಗೊಂಡಿದೆ.

ಸಾಮಾನ್ಯವಾಗಿ ಗ್ರಾಮಗಳು ಜಾತಿ ವ್ಯವಸ್ಥೆಯನ್ನು ಪೋಷಿಸುತ್ತಿರುವ ತಾಣಗಳು ಎನ್ನಬಹುದು. ಮಲೆನಾಡಿನ ಗ್ರಾಮೀಣ ಪ್ರದೇಶದಲ್ಲಿಯೂ ಹಲವು ಜಾತಿಗಳಿದ್ದು, ಜಾತಿ ಜಾತಿಗಳ ನಡುವೆ ಕೆಲವು ಆಚರಣೆಗಳನ್ನು, ನಂಬಿಕೆಗಳನ್ನು, ನಿಯಮಗಳನ್ನು ರೂಪಿಸಿಕೊಳ್ಳಲಾಗಿತ್ತು. ಅವುಗಳ ಕಟ್ಟುನಿಟ್ಟಿನ ಆಚರಣೆಯಲ್ಲಿ ನಿರಂತರ ಶೋಷಣೆಗೆ ಒಳಗಾದ ದಲಿತರ ಬದುಕಿನ ಚಿತ್ರಣವನ್ನು ಕಾದಂಬರಿ ಬಿಚ್ಚಿಡುತ್ತಾ ಹೋಗುತ್ತದೆ.

"ಒಂದು ಮಟ್ಟದ ಶೋಷಣೆಯನ್ನು ಪ್ರತಿಭಟಿಸುವ ಲೇಖಕ ಮತ್ತೊಂದು ಮಟ್ಟದ ಶೋಷಣೆಯನ್ನು ವಿರೋಧಿಸದೆ ಹೋದಾಗ ಸ್ವಜನ ಪಕ್ಷಪಾತಿಯೂ ವರ್ಗ ಹಿತಾಸಕ್ತನೂ ಆಗುತ್ತಾನೆ ಎಂಬುದು ಸೂರ್ಯಪ್ರಕಾಶದಷ್ಟು ನಿಚ್ಚಳ. ಕುವೆಂಪು ಕೆಳವರ್ಗದ ಜೀವನ ಚಿತ್ರಣ ಮಾಡುವಾಗ ಇಂತಹ ಆರೋಪದಿಂದ ಮುಕ್ತವಾಗಿಲ್ಲ."೧ ಬಹುಶಃ ಇದು ಒಪ್ಪಲಿಕ್ಕೆ ಸಾಧ್ಯವಿಲ್ಲದ ಮಾತೆನಿಸುತ್ತದೆ. ಏಕೆಂದರೆ ದಲಿತ ಬಂಡಾಯದ ಜನಪರ ನಿಲುವುಗಳ ಭೂಮಿಕೆಯಲ್ಲಿ ನಿಂತು ವಿಚಾರ ಮಾಡುವಾಗ, ಯಾವುದೇ ಮಟ್ಟದ ಶೋಷಣೆಯ ವಿರುದ್ಧ ಪ್ರತಿಭಟಿಸುವುದು ಅಥವಾ ತನ್ನ ಜಾತಿ ವರ್ಗವನ್ನು ಸೇರಿಸಿಕೊಂಡು ಸಮಸ್ತ ಜಾತಿ ವ್ಯವಸ್ಥೆಯ ಹಾಗೂ ಅದರ ಶೋಷಣೆಯ ವಿರುದ್ಧ ಬಂಡೇಳುವುದು ಕುವೆಂಪು ಕಾದಂಬರಿಗಳಲ್ಲಿನ ಸ್ಥಾಯಿಭಾವದಲ್ಲಿರುವುದು ವಾಸ್ತವಿಕ ಸತ್ಯವೇ ಆಗಿರುವುದರಿಂದ ಕುವೆಂಪು ಶೋಷಣೆಯ ವಿರುದ್ಧ ಪ್ರತಿಭಟಿಸುವ ಲೇಖಕರು ಎಂಬುದಕ್ಕೆ ಅವರ ಮೇಲಿನ ರಾಮಕೃಷ್ಣ ಆಶ್ರಮದ ಪ್ರಭಾವ ಮಾತ್ರವಲ್ಲದೆ ಅವರ ಕಾದಂಬರಿಗಳಲ್ಲಿನ ಹೂವಯ್ಯ ಮತ್ತು ಮುಕುಂದಯ್ಯ ಮುಂತಾದ ಪಾತ್ರಗಳಲ್ಲಿ ಕೂಡ ತೀರ ವಸ್ತುನಿಷ್ಠವಾದ ಆಧಾರಗಳನ್ನು ಕಾಣಬಹುದು.

ಇದೇ ಸಂದರ್ಭದಲ್ಲಿ ಕುವೆಂಪುರವರ ತಮ್ಮ 'ಶ್ರೀರಾಮಾಯಣ ದರ್ಶನಂ' ಕಥಾ ವಸ್ತುವಿನಲ್ಲಿ ಮಾಡಿಕೊಂಡ ಪರಿವರ್ತನೆಗಳಲ್ಲಿ 'ಬೆರಳ್ಗೆ ಕೊರಳ್' ಮತ್ತು 'ಶೂದ್ರತಪಸ್ವಿ' ಗಳಲ್ಲಿ ಅವರು ತೋರಿದ ಪ್ರತಿಭಟನಾತ್ಮಕ ಧೋರಣೆ ತನ್ನ ತಾನೆ ಕೆಲವು ಪರಿಮಿತಿಗಳನ್ನು ಹೊಂದಿದೆ. ಅಲ್ಲೆಲ್ಲೂ 'ಮಲೆಗಳಲ್ಲಿ ಮದುಮಗಳು' ನಂತೆ ಜಾತಿಗಿಂತಲೂ ಘೋರವೂ ಮೂಲಭೂತವೂ ಆದ ಅಸ್ಪೃಶ್ಯರ ಸಮಸ್ಯೆಗಳನ್ನು ತರಲಾಗಿಲ್ಲವೆಂಬುದನ್ನು ಗಮನಿಸಬಹುದು.

ಕುವೆಂಪು 'ಬ್ರಾಹ್ಮಣ ವಿರೋಧಿ' ಪುರೋಹಿತಶಾಹಿಯ ಹೆಸರಿನಲ್ಲಿ ಬ್ರಾಹ್ಮಣರನ್ನು ಬಲಿ ತೆಗೆದುಕೊಂಡಿದ್ದಾರೆ. ಕುವೆಂಪು ದಲಿತ ವಿರೋಧಿ. ದಲಿತರು ಇಲ್ಲಿ ಯಜ್ಞಪಶುಗಳಂತೆ ಗೋಚರಿಸುತ್ತಾರೆ. ಕುವೆಂಪು "ಹೊಲೆಮಾದಿಗರ ಗುಡಿಸಲುಗಳ ಅಂತರಂಗವನ್ನು ತೆರೆದುತೋರಿಸಿಲ್ಲ."೨

ಹೀಗೆ ಕುವೆಂಪು ಅವರನ್ನು ಟೀಕಿಸುವ ವಿಮರ್ಶಕರ ಒಂದು ಬಣವಿದ್ದರೆ, ಕುವೆಂಪು ಜಾತಿವಾದಿಯಲ್ಲ, ಕುವೆಂಪು ಶೂದ್ರರ ಪರ ಅಲ್ಲ, ಕುವೆಂಪು ಪುರೋಹಿತಶಾಹಿಯ ವಿರೋಧಿಯೇ ಹೊರತು ಬ್ರಾಹ್ಮಣ ವಿರೋಧಿಯಲ್ಲ. ಕುವೆಂಪು ದಲಿತೋದ್ಧಾರಕ, ಅವರ ಕಾದಂಬರಿಗಳಲ್ಲಿ ಹರಿಯುವುದು, ಶೂದ್ರರ ರಕ್ತ ಎನ್ನುವ ಇನ್ನೊಂದು ವರ್ಗದ ವಿಮರ್ಶಕರ ಬಣವೂ ಇದೆ.

ಮೇಲೆ ಸೂಚಿಸಲಾದ ಎರಡು ವರ್ಗದ ವಿಮರ್ಶಕರ ಬರವಣಿಗೆಗಳು ಕ್ರಿಯೆ ಪ್ರತಿಕ್ರಿಯೆಯಲ್ಲಿಯೇ ವಿರಮಿಸುತ್ತವೆ. ಇದು ವಿಮರ್ಶೆಯ ಕ್ಷೇತ್ರಕ್ಕಾಗಲಿ, ಕೃತಿಕಾರನಿಗಾಗಲಿ ಸಲ್ಲುವ ಗೌರವವಲ್ಲ. ಆರೋಗ್ಯಕರ ಸಮಾಜದ ಲಕ್ಷಣವಲ್ಲ. ಇದು ಕೃತಿಯ ಮೌಲ್ಯಕ್ಕೆ ಕೃತಿಕಾರನ ವಿಚಾರಧಾರೆಗೆ ಮಾಡಿದ ಅವಮಾನವೆನಿಸುತ್ತದೆ. ಜೊತೆಗೆ ವಿಮರ್ಶೆಯ ಕ್ಷೇತ್ರವನ್ನು ಹದಗೆಡಿಸಿದಂತಾಗುತ್ತದೆ. ಒಬ್ಬ ದಲಿತ ಲೇಖಕನ ಬರವಣಿಗೆ ದಲಿತ ಜಗತ್ತಿನ ಸಮಗ್ರ ಜನಾಂಗದ ಪ್ರತಿನಿಧಿಯಾಗಿ ಮೂಡಿಬರಲಾರದು. ಅಭಿವೃದ್ಧಿ ಎನ್ನುವುದು ಆತನ ಅನುಭವದ ಮತ್ತು ಸ್ಪಂದನಗಳ ವಲಯಗಳೊಂದಿಗೆ ಆತನ ಅಭಿವ್ಯಕ್ತಿ ಸಾಮರ್ಥ್ಯದೊಂದಿಗೆ ರೂಪ ಪಡೆದುಕೊಳ್ಳುತ್ತದೆ.

ಎಂದರೆ ದಲಿತನ ವ್ಯಕ್ತಿಗತ ದಲಿತಾನುಭವ ದಲಿತ ಪರಿಸರದಲ್ಲಿ ಆತ ಸ್ಪಂದನೆಯಿಂದ ಕಂಡುಕೊಂಡ ಅನುಭವ ಹಾಗೂ ದಲಿತೇತರರೊಂದಿಗೆ ದಲಿತೀಯ ನೆಲೆಯಿಂದ ಸ್ಪಂದಿಸಿದ ಅನುಭವ ಹೀಗೆ ಒಬ್ಬನೇ ಪಡೆಯುವ ಅನುಭವ ಭಿನ್ನಸ್ತರಗಳಿಂದ ಕೂಡಿರುತ್ತದೆ. ಹೀಗಾಗಿ ಒಬ್ಬ ದಲಿತ ಲೇಖಕ ಸಮಗ್ರ ಜನತೆಯ ದಲಿತಾನುಭವವನ್ನು ಕೊಡಲು ಹೇಗೆ ಪರಿಪೂರ್ಣನಲ್ಲವೋ ಹಾಗೆಯೇ ಇನ್ನುಳಿದ ವರ್ಗಗಳಿಗೆ ಸಂಬಂಧಿಸಿದ ಲೇಖಕರೂ ಆಯಾ ವಲಯದ ಅನುಭವಗಳ ರೂಪವನ್ನು ಪರಿಪೂರ್ಣವಾಗಿ ಕೊಡಲಾರರು ಎಂದು ಭಾವಿಸಬೇಕಾಗಿಲ್ಲ ಯಾವುದೇ ಜನಾಂಗಕ್ಕೆ ಸೇರಿದ ವ್ಯಕ್ತಿ ಆತ ಅನುಭವಿಸಿದ ಅನುಭವಗಳಿಗೆ ಸ್ಪಂದಿಸುವ ಸ್ವರೂಪ ಮತ್ತು ಅಭಿವ್ಯಕ್ತಿಯ ಸಾಮರ್ಥ್ಯದ ಮೇಲೆ ಪ್ರತಿಪಾದಿಸ ಹೊರಟ ವಿಚಾರಗಳ ಮೇಲೆ ಕೃತಿ ರೂಪಗೊಂಡಿರುತ್ತದೆ. ಇಂಥಲ್ಲಿ ನಾವು ಎಲ್ಲ ವರ್ಗಗಳ ಜಾತಿ, ಧರ್ಮಗಳ ಅನುಭವಗಳನ್ನು ಸಮಗ್ರವಾಗಿ ನಿರೀಕ್ಷಿಸಲಾಗದು. ಹೀಗೆ ನಿರೀಕ್ಷೆ ಮಾಡುವುದು ಸಮಂಜಸವಿಲ್ಲ.

ಆದರೆ ಆತ ಕೃತಿಯಲ್ಲಿ ಕಟ್ಟಿಕೊಡುವ ಒಟ್ಟು ಬದುಕನ್ನು ವಿಮರ್ಶಿಸದಿರಲೂ ಆಗದು. ಹೀಗೆ ವಿಮರ್ಶಿಸಿದಾಗಲೇ ಅಲ್ಲಿ ನಿಜ ಸ್ವರೂಪದ ಚಿಂತನೆಯ ಮಾರ್ಗವನ್ನು ನಾವು ಗಿಟ್ಟಿಸಿಕೊಳ್ಳುವುದು ಸಾಧ್ಯವಾಗುತ್ತದೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ವಿಚಾರವೆಂದರೆ, ಆಯಾವರ್ಣದ ಜನತೆ ಅವರ ಬದುಕಿನ ಪರಿಸರ ಮತ್ತು ಅನುಭವಗಳ ಹಿನ್ನೆಲೆಯಲ್ಲಿ ಅವನು ತಾನು ಕಂಡುಂಡ ಪರಿಸರದಂತೆ ಬದುಕನ್ನು ವ್ಯಾಖ್ಯಾನಿಸುತ್ತಾನೆ. ಹೀಗಾಗಿ ಕುವೆಂಪು ಅವರ ಕೃತಿಗಳಲ್ಲಿ "ದಲಿತರು ಬ್ರಾಹ್ಮಣರ ಅನುಭವಗಳು ತಾಜಾತನದಿಂದ ಮೂಡಿಲ್ಲ"೩ ಎನ್ನುವುದು ಬುಡರಹಿತ ವಿಚಾರವಾಗುತ್ತದೆ.

ಕುವೆಂಪುರವರ ಒಟ್ಟು ಧೋರಣೆ ಸರ್ವೋದಯದ ಸಮಷ್ಠಿಯ ಪರಿಕಲ್ಪನೆಯಿಂದ ವಿಶ್ವಮಾನವ ಪರಿಕಲ್ಪನೆಗೆ ತಲುಪಿದೆ. ವಿಶ್ವಮಾನವ ಪರಿಕಲ್ಪನೆ ಮತ್ತು ಅನಿಕೇತನ ಪರಿಕಲ್ಪನೆ ಅವರ ಆರಂಭದ ಕೃತಿಗಳಿಂದಲೂ ಸುಪ್ತವಾಗಿ ಹರಿಡಿಕೊಂಡಿದ್ದರೂ ಅದು ಹರಳುಗೊಂಡು ತನ್ನದೇ ಆದ ಅಸ್ತಿತ್ವ ಪಡೆದುಕೊಂಡಿದ್ದು ಕಾದಂಬರಿಗಳಲ್ಲಿ. ಪ್ರಸ್ತುತ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಈ ಗುಣ ಗೋಚರವಾಗದಿರಲಾರದು. ತನ್ನೊಳಗಿನ 'ತಾನು' ಮೀರಿ 'ನಾವು' ಆಗೋದೇ ಒಂದು ಮಹತ್ವದ ಘಟ್ಟ. ಕಾದಂಬರಿಯ ಕೊನೆಯಲ್ಲಿ ಗುತ್ತಿ ದೇಶಾಂತರ ಹೋಗುವಲ್ಲಿ ಕುವೆಂಪುರವರ ಅನಿಕೇತನ ಪರಿಕಲ್ಪನೆ ವ್ಯಕ್ತವಾಗುತ್ತದೆ. ಹೀಗಾಗಿಯೇ ಅವರು ಕಾದಂಬರಿಯ ಆರಂಭದಲ್ಲಿಯೇ ಹೇಳುವ

" ಇಲ್ಲಿ ಯಾವುದಕ್ಕೂ ಮೊದಲಿಲ್ಲ;
ಯಾವುದಕ್ಕೂ ತುದಿಯಿಲ್ಲ;
ಯಾವುದೂ ಎಲ್ಲಿಯೂ ನಿಲ್ಲುವುದೂ ಇಲ್ಲ;
ಕೊನೆ ಮುಟ್ಟುವುದೂ ಇಲ್ಲ!"೪

ಎಂಬ ಮಾತು ಓದುಗನ ಮನಸ್ಸಿನಲ್ಲಿ ಸದಾ ಅನುರಣನಗೊಳ್ಳುತ್ತದೆ.

**ಅಡಿ ಟಿಪ್ಪಣಿ**

೧. ಬಿ.ಕೃಷ್ಣಪ್ಪ : ಶ್ರೀ ಕುವೆಂಪು ಪುಟ ಸಂ.೧೨೩
೨. ಪ್ರೊ। ಅರವಿಂದ ಮಾಲಗತ್ತಿ : ದಲಿತ ಯುಗ ಮತ್ತು ಕನ್ನಡ ಸಾಹಿತ್ಯ ಪು. ಸಂ.೧೧೨
೩. ಪ್ರೊ। ಅರವಿಂದ ಮಾಲಗತ್ತಿ : ದಲಿತಯುಗ ಮತ್ತು ಕನ್ನಡ ಸಾಹಿತ್ಯ ಪು.ಸಂ.೧೧೪
೪. ಕುವೆಂಪು : ಮಲೆಗಳಲ್ಲಿ ಮದುಮಗಳು

# ಅ. ಗ್ರಂಥಋಣ


೧. ಕುವೆಂಪು : ಮಲೆಗಳಲ್ಲಿ ಮದು ಮಗಳು
ಪ್ರ: ಉದಯರವಿ ಪ್ರಕಾಶನ ವಾಣೀವಿಲಾಸ ಪುರಂ

೨. ಡಾ. ಗುರುಪಾದ ಮರಿಗುದ್ದಿ : ಕುವೆಂಪು ಕಾದಂಬರಿಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು- ೫೬೦ ೦೦೨.

೩. ಟಿ.ಪಿ.ಅಶೋಕ: ಕುವೆಂಪು ಕಾದಂಬರಿಗಳೂ ಎರಡು ಅಧ್ಯಯನ, ಅಕ್ಷರ ಪ್ರಕಾಶನ ಹೆಗ್ಗೋಡು, ಬೆಂಗಳೂರು.

೪. ಡಾ.ಚಕ್ಕೆರೆ ಶಿವಶಂಕರ್ : ಸಹ್ಯಾದ್ರಿಯ ಸೂರ್ಯ, ಬಿ.ಎಂ.ಶ್ರೀ ಅಚ್ಚುಕೂಟ ಆಫ್‌ಸೆಟ್ ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ ಬೆಂಗಳೂರು- ೧೮.

೫. ಡಾ.ಉದ್ದಂಡಯ್ಯ : ಕುವೆಂಪು ಕಥನ, ಅಧ್ಯಯನ ಮಂಡಲ, ಆರ್.ವಿ.ರೋಡ್, ಬಸವನಗುಡಿ, ಬೆಂಗಳೂರು-೫೬೦ ೦೦೪.

೬. ಪ್ರೊ|| ಸೋಮಶೇಖರಗೌಡ : ಕುವೆಂಪು : ಅನುಸಂಧಾನ, ಸಿವಿಜಿ ಪ್ರಕಾಶನ, ನಂ.೭೦, ಎರಡನೇ ಮುಖ್ಯರಸ್ತೆ, ಜಬ್ಬರ್‌ಬ್ಲಾಕ್, ವಯ್ಯಾಲಿಕವಲ್, ಬೆಂಗಳೂರು- ೫೬೦ ೦೦೩.

೭. ಡಾ.ಯು.ಆರ್.ಅನಂತಮೂರ್ತಿ : ಪ್ರಜ್ಞೆ ಮತ್ತು ಪರಿಸರ, ಅಕ್ಷರ ಪ್ರಕಾಶನ ಸಾಗರ.

೮. ಡಿ.ಆರ್.ನಾಗರಾಜು : ಅಮೃತ ಮತ್ತು ಗರುಡ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೯. ಜವರೇಗೌಡ ದೇ. ಸಹ್ಯಾದ್ರಿ, ಪರಮಶಿವಯ್ಯ ಜೀ.ಸಂ., ಕೃಷ್ಣಕುಮಾರ.ಸಿ.ಪಿ. ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು.

೧೦. ಮ.ನ.ಜವರಯ್ಯ: ಪರಂಪರೆ ಮತ್ತು ದಲಿತ ಬಂಡಾಯ ಸಮಗ್ರ ಅಧ್ಯಯನ

೧೧. ಡಾ.ಅರವಿಂದ ಮಾಲಗತ್ತಿ : ದಲಿತ ಯುಗ ಮತ್ತು ಕನ್ನಡ ಸಾಹಿತ್ಯ

೧೨. ಗಿರಡ್ಡಿ ಗೋವಿಂದರಾಜು- ನವ್ಯವಿಮರ್ಶೆ

೧೩. ಮು.ಶಿವನಂಜಯ್ಯ : ಕುವೆಂಪು ಕಾದಂಬರಿಗಳಲ್ಲಿ ಜನ ಜೀವನ

೧೪. ಎಸ್. ಚನ್ನಪ್ಪ : ಕುವೆಂಪು ಸಾಹಿತ್ಯ ಸಹ್ಯಾದ್ರಿ

೧೫. ಎಂ.ಜಿ.ಕೃಷ್ಣಮೂರ್ತಿ : ಕೃತಿ ಸಂಸ್ಕೃತಿ, ಋಜುವಾತು ಪ್ರಕಾಶನ, ಮೈಸೂರು.

೧೬. ಎಸ್.ಎಸ್.ರಾಘವೇಂದ್ರರಾವ್ : ಶತಮಾನದ ಸಾಹಿತ್ಯ ವಿಮರ್ಶೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೭. ದ.ರಾ,ಬೇಂದ್ರೆ : ಒಲವೆ ನಮ್ಮ ಬದುಕು
೧೮. ಕುವೆಂಪು : ಸ್ಮಶಾನ ಕುರುಕ್ಷೇತ್ರಂ

೧೯. ಕೊದಂಡರಾಮ ಎನ್.ಕೆ., ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ಗಾಯಿತ್ರಿ ಸ್ಮಾರಕ ಗ್ರಂಥ ಮಾಲೆ, ಬೋಗಾದಿ, ಮೈಸೂರು.

೨೦. ಚ.ನ.ಶಂಕರ್‌ರಾವ್: ಸಮಾಜಶಾಸ್ತ್ರ, ಜೈಭಾರತ್ ಪ್ರಕಾಶನ, ಮಂಗಳೂರು.

೨೧. ಪ್ರೊ॥ ದಯಾನಂದ ಮಾನೆ: ಬಾಬಾಸಾಹೇಬ್ ಅಂಬೇಡ್ಕರ್ ಮತ್ತು ದಲಿತ ಚಳುವಳಿ, ಪ್ರಕಾಶಕರು: ಡಾ.ಬಿ.ಆರ್.ಅಂಬೇಡ್ಕರ್ ರೀಸರ್ಚ್ ಅಕಾಡೆಮಿ, ಮೈಸೂರು-೨೬.

೨೨. ಕೃಷ್ಣಪ್ಪ ಬಿ: ಶ್ರೀ ಕುವೆಂಪು, ಪ್ರಸಾರಾಂಗ, ಬೆಂಗಳೂರು ವಿ.ವಿ., ಬೆಂಗಳೂರು-೫೬.

೨೩. ಜವರೇಗೌಡ ದೇ: ಕುವೆಂಪು ಸಾಹಿತ್ಯ ಚಿಂತನ, ಸಹ್ಯಾದ್ರಿ ಪ್ರಕಾಶನ, ಮೈಸೂರು.

# ಆ. ಕುವೆಂಪು ಕೃತಿಗಳು

## ಕವನ ಸಂಕಲನ, ಮಹಾಕಾವ್ಯ, ಖಂಡಕಾವ್ಯ, ಕವನ ಸಂಕಲನ

೧೯೨೨- Beginner's Muse - ಪ್ರಾರಂಭದ ಇಂಗ್ಲೀಷ್ ಕವನ ಸಂಕಲನ

೧೯೨೪- ಅಮಲನ ಕಥ- ಮಕ್ಕಳಿಗಾಗಿ ಬರೆದ ಲಘುಕಾಲ್ಪನಿಕ ಕಾವ್ಯ

೧೯೨೬- ಹಾಳೂರು-ನೀಳ್ಗವನ

೧೯೨೮- ಬೊಮ್ಮನಹಳ್ಳಿಯ ಕಿಂದರಿಜೋಗಿ: ನೀಳ್ಗಾವ್ಯ ಮೊದಲು ಕಿರಿಯರ ಕಾಣಿಕೆ ಯಲ್ಲಿ ಪ್ರಕಟವಾಯಿತು.

೧೯೩೦- ಕೊಳಲು –ಕುವೆಂಪು ಅವರ ಮೊದಲನೆಯ ಪ್ರಾತಿನಿಧಿಕ ಕವನ ಸಂಕಲನ

೧೯೩೩ - ಪಾಂಚಜನ್ಯ – ಕ್ರಾಂತಿಕವನಗಳು

೧೯೩೪- ನವಿಲು- ಪ್ರಕೃತಿ ಪ್ರಧಾನವಾದ ಕವನಗಳು

೧೯೩೪- ಕಲಾಸುಂದರಿ ಪ್ರಕೃತಿ ಪ್ರಧಾನವಾದ ಕವನಗಳು

೧೯೩೬- ಕಿಂದರಿಜೋಗಿ ಮತ್ತು ಇತರ ಕಥನ ಕವನಗಳು

೧೯೩೬- ಚಿತ್ರಾಂಗದಾ- ಸರಳ ರಗಳೆಯ ಖಂಡಕಾವ್ಯ

೧೯೪೪- ಕೋಗಿಲೆ ಮತ್ತು ಸೋವಿಯತ್ ರಷ್ಯಾ-ಕ್ರಾಂತಿ ಕವನಗಳು

೧೯೪೬- ನನ್ನ ಮನೆ-ಶಿಶು ಗೀತೆಗಳು

೧೯೪೬- ಕೃತ್ತಿಕೆ- ಪ್ರಧಾನವಾದ ಸಾನೆಟ್ಟುಗಳ ಕವನ ಸಂಕಲನ

೧೯೪೬ - ಪಕ್ಷಿಕಾಶಿ ಪ್ರಕೃತಿ ಪ್ರಧಾನವಾದ ಕವನಗಳು

೧೯೪೬- ಪ್ರೇಮಕಾಶ್ಮೀರ- ಪ್ರೇಮಗೀತೆಗಳು

೧೯೪೬- ಅಗ್ನಿಹಂಸ- ಅನುಭಾವ ಪ್ರಧಾನವಾದ ಕವನಗಳು

೧೯೪೬- ಕಿಂಕಿಣಿ- ವಚನ ಕವನಗಳು

೧೯೪೬- ಶಿಶು ಗೀತಾಂಜಲಿ

೧೯೪೭ - ಮೇಘಪುರ-ಶಿಶುಗೀತೆಗಳು

೧೯೪೭ - ಮರಿ ವಿಜ್ಞಾನಿ-ಶಿಶುಗೀತೆಗಳು

೧೯೪೭ - ಷೋಡಶಿ-ಪ್ರೇಮಗೀತೆಗಳು

೧೯೪೭ - ಶ್ರೀ ಸ್ವಾತಂತ್ರ್ಯೋದಯ ಮಹಾಗಾಥಾ ದೀರ್ಘಕವಿತೆ

೧೯೪೮ - ಬಾಪೂಜಿಗೆ ಬಾಷ್ಪಾಂಜಲಿ-ಏಳು ಕವಿತೆಗಳು ಎರಡು ಭಾಷಣಗಳು

೧೯೪೯- ಶ್ರೀ ರಾಮಾಯಣ ದರ್ಶನಂ- ಸಂಪುಟ-೧ ಮಹಾಛಂದಸ್ಸಿನ ಕಾವ್ಯ

೧೯೫೧- ಶ್ರೀ ರಾಮಾಯಣ ದರ್ಶನಂ- ಸಂಪುಟ-೨ ಮಹಾಛಂದಸ್ಸಿನ ಕಾವ್ಯ

೧೯೫೪- ಚಂದ್ರಮಂಚಕೆ ಬಾ, ಚಕೋರಿ! -ಪ್ರೇಮ ಕವನಗಳು

೧೯೫೭- ಇಕ್ಷುಗಂಗೋತ್ರಿ- ದೇಶ-ಸಮಾಜವನ್ನು ಕುರಿತ ಕವನಗಳು

೧೯೬೩- ಅನಿಕೇತನ-ಅನುಭಾವ ಪ್ರಧಾನವಾದ ಕವಿತೆಗಳು

೧೯೬೫- ಅನುತ್ತಾರಾ-ಪ್ರೇಮ ಕವಿತೆಗಳು

೧೯೬೬- ಮಂತ್ರಾಕ್ಷತೆ- ಸಂಕೀರ್ಣ ಪುಡಿ ಕವನಗಳು
೧೯೬೭- ಪ್ರೇತ-ಕ್ಯೂ-ಸಾಮಾಜಿಕ, ರಾಜಕೀಯ ಸ್ಥಿತಿಗತಿಯನ್ನು ಕುರಿತ ಕವನಗಳು
೧೯೬೭- ಕುಟೀಚಕ-ಅನುಭಾವ ಪ್ರಧಾನವಾದ ಕವನಗಳು
೧೯೬೭- ಕದರಡಕೆ-ಪ್ರಕೃತಿ ಪ್ರಧಾನವಾದ ಕವನಗಳು
೧೯೭೬- ಹೊನ್ನ ಹೊತ್ತಾರ- ಕವಿತೆಗಳ ಸಂಕಲನ
೧೯೭೩- ಎಲಿಯನ್ ಹಾರ್ಪ್-ಇಂಗ್ಲೀಷ್ ಕವನಗಳು
೧೯೮೧- ಕೊನೆಯ ತೆನೆ ಮತ್ತು ವಿಶ್ವ ಮಾನವ ಸಂದೇಶ
೧೯೮೧- ಸಮುದ್ರಲಂಘನ- ಸರಳ ರಗಳೆಯ ಖಂಡಕಾವ್ಯ
೧೯೮೫- ಮಹಾದರ್ಶನ ಮತ್ತು ಪ್ರಾಯಶ್ಚಿತ-ಸರಳ ರಗಳೆಯ ಎರಡು ಖಂಡ ಕಾವ್ಯಗಳು
೧೯೯೭- ಶ್ರೀ ರಾಮಾಯಣದರ್ಶನಂ - ಹಸ್ತಾಕ್ಷರದ ಮೂಲ ಪ್ರತಿಯ ಪ್ರತಿಕೃತಿ ಪ್ರಕಟಣೆ

## ನಾಟಕಗಳು

೧೯೨೬- ಮೋಡಣ್ಣನ ತಮ್ಮ-ಮಕ್ಕಳ ನಾಟಕ
೧೯೨೮- ಯಮನ ಸೋಲು
೧೯೨೮- ಜಲಗಾರ
೧೯೩೦- ನನ್ನ ಗೋಪಾಲ
೧೯೩೦- ಬಿರುಗಾಳಿ
೧೯೩೧- ಮೂರು ನಾಟಕಗಳು, ಮಹಾಶಿವರಾತ್ರಿ, ಸ್ಮಶಾನ ಕುರುಕ್ಷೇತ್ರಂ, ಜಲಗಾರ.
೧೯೩೧- ವಾಲ್ಮೀಕಿಯ ಭಾಗ್ಯ
೧೯೩೧- ರಕ್ತಾಕ್ಷಿ
೧೯೪೪- ಶೂದ್ರ ತಪಸ್ವಿ
೧೯೪೭- ಬಲಿದಾನ
೧೯೬೩- ಚಂದ್ರಹಾಸ
೧೯೭೪- ಕಾನೀನ
೧೯೯೫- ಸ್ಮಶಾನ ಕುರುಕ್ಷೇತ್ರಂ ಮತ್ತು ಮಹಾಶಿವರಾತ್ರಿ
೧೯೯೫- ಸ್ಮಶಾನ ಕುರುಕ್ಷೇತ್ರಂ ಮತ್ತು ಬೆರಳ್ಗೆ ಕೊರಳ್

## ಕಾದಂಬರಿ, ಕಥೆ, ಗದ್ಯ ಚಿತ್ರ

೧೯೩೦- ನರಿಗಳಗೇಕೆ ಕೋಡಿಲ್ಲ – ಮಕ್ಕಳ ಕಥೆ
೧೯೩೩- ಮಲೆನಾಡಿನ ಚಿತ್ರಗಳು- ಗದ್ಯ ಚಿತ್ರಗಳ ಸಂಕಲನ
೧೯೩೬- ಸಂನ್ಯಾಸಿ ಮತ್ತು ಇತರ ಕಥೆಗಳು- ಸಣ್ಣ ಕಥೆಗಳ ಸಂಕಲನ
೧೯೩೬- ಕಾನೂರು ಹೆಗ್ಗಡಿತಿ- ಕುವೆಂಪು ಅವರ ಪ್ರಥಮ ಮಹಾಕಾದಂಬರಿ
೧೯೪೦- ನನ್ನ ದೇವರು ಮತ್ತು ಇತರ ಕಥೆಗಳು, ಕಥಾಸಂಕಲನ
೧೯೬೭ - ಮಲೆಗಳಲ್ಲಿ ಮದುಮಗಳು- ಕುವೆಂಪು ಅವರ ಎರಡನೆಯ ಕಾದಂಬರಿ
೧೯೮೫- ಕತೆಗಳೊಡನೆ ಆರಂಭದಲ್ಲಿ- ಕಥಾಸಂಕಲನ

## ಕಾವ್ಯಮೀಮಾಂಸೆ, ಸಾಹಿತ್ಯ ವಿಮರ್ಶೆ, ಭಾಷಣ, ಪತ್ರಗಳು

೧೯೪೪- ಸಾಹಿತ್ಯ ಪ್ರಚಾರ- ಭಾಷಣಗಳ ಸಂಗ್ರಹ
೧೯೪೪- ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ- ಭಾಷಣಗಳ ಸಂಕಲನ
೧೯೪೬- ಕಾವ್ಯವಿಹಾರ- ವಿಮರ್ಶಾತ್ಮಕ ಲೇಖನಗಳು
೧೯೫೦- ತಪೋನಂದನ – ದಾರ್ಶನಿಕ ವಿಮರ್ಶೆ
೧೯೫೩- ವಿಭೂತಿ ಪೂಜೆ- ವಿಮರ್ಶೆಯ ಲೇಖನಗಳು
೧೯೫೯- ವಿಶ್ವವಿದ್ಯಾನಿಲಯದ ಪ್ರಸಾರಾಂಗ, ಕುಲಪತಿ ಭಾಷಣಗಳ ಆಯ್ದಭಾಗಗಳು
೧೯೬೦- ದ್ರೌಪದಿಯ ಶ್ರೀಮುಡಿ- ಸಾಹಿತ್ಯ ವಿಮರ್ಶೆ ಮತ್ತು ಕಾವ್ಯಮೀಮಾಂಸೆ
೧೯೬೨- ರಸೋವೈಸಃ- ಸಾಹಿತ್ಯ ವಿಮರ್ಶೆ ಮತ್ತು ಕಾವ್ಯಮೀಮಾಂಸೆ
೧೯೬೪- ಷಷ್ಠಿನಮನ- ಭಾಷಣ, ಲೇಖನ, ಮುನ್ನುಡಿಗಳ ಸಂಗ್ರಹ
೧೯೬೬- ಶ್ರೀ ಕುವೆಂಪು ಭಾಷಣಗಳು- ಭಿನ್ನವತ್ತಳೆಗಳು
೧೯೭೦- ಇತ್ಯಾದಿ- ವಿಮರ್ಶಾ ಸಂಕಲನ
೧೯೭೧- ಮನುಜಮತ ವಿಶ್ವಪಥ-ಭಾಷಣ ಲೇಖನ ಸಂಗ್ರಹ
೧೯೭೬- ವಿಚಾರಕ್ರಾಂತಿಗೆ ಆಹ್ವಾನ -ಭಾಷಣ ಸಂಕಲನ
೧೯೭೬- ರಾಷ್ಟ್ರಕವಿ ಭಾಷಣಗಳು
೧೯೭೮- ಜನತಾ ಪ್ರಜ್ಞೆ ಮತ್ತು ವೈಚಾರಿಕ ಜಾಗೃತಿ- ಭಾಷಣ ಸಂಗ್ರಹ
೧೯೮೩- ದಾರ್ಶನಿಕ ಕಾವ್ಯ ಮೀಮಾಂಸೆ- ಆಯ್ದ ವಿಮರ್ಶಾ ಲೇಖನಗಳ ಸಂಕಲನ
೧೯೮೯- ಮುನ್ನುಡಿ ತೋರಣ
೧೯೭೪- ಕುವೆಂಪು ಪತ್ರಗಳು
೧೯೯೩- ಶ್ರೀ ರಾಮಕೃಷ್ಣ ವಚನವೇದ ನುಡಿನಮನ- ಕಿರು ಪುಸ್ತಿಕೆ

## ಭಾಷಾಂತರ

೧೯೩೩- ವಿವೇಕವಾಣಿ- ವಿವೇಕಾನಂದರ ಬರಹಗಳಿಂದ ಆಯ್ದ ಭಾಗಗಳ ಭಾಷಾಂತರ ಹಾಗೂ ಪ್ರೇರಿತ ಕವನ, ಗದ್ಯ ಚಿತ್ರಗಳು
೧೯೩೪- ವೇದಾಂತ-ಸ್ವಾಮಿ ವಿವೇಕಾನಂದರ ಭಾಷಣದ ಅನುವಾದ ಪುಸ್ತಿಕೆ
೧೯೫೦- ಜನಪ್ರಿಯ ವಾಲ್ಮೀಕಿ ರಾಮಾಯಣ- ಮೂಲರಾಮಾಯಣದ ಕಥೆ
೧೯೫೪- ಗುರುವಿನೊಡನೆ ದೇವರಡಿಗೆ ಭಾಗ-೧ ಶ್ರೀ ಸ್ವಾಮಿ ಶಿವಾನಂದರ ಮಾತುಕತೆಗಳು
೧೯೬೪- ಗುರುವಿನೊಡನೆ ದೇವರಡಿಗೆ ಭಾಗ-೨ ಶ್ರೀ ಸ್ವಾಮಿ ಶಿವಾನಂದರ ಮಾತುಕತೆಗಳು

## ಜೀವನ ಚರಿತ್ರೆ, ಆತ್ಮ ಚರಿತ್ರೆ

೧೯೩೨- ಸ್ವಾಮಿ ವಿವೇಕಾನಂದ ಜೀವನ ಚರಿತ್ರೆ
೧೯೩೪- ಶ್ರೀ ರಾಮಕೃಷ್ಣ ಪರಮಹಂಸ- ಜೀವನ ಚರಿತ್ರೆ
೧೯೮೦- ನೆನಪಿನ ದೋಣಿಯಲ್ಲಿ ಭಾಗ-೧-ಆತ್ಮಕಥೆ
೧೯೮೫- ನೆನಪಿನ ದೋಣಿಯಲ್ಲಿ ಭಾಗ-೨-ಆತ್ಮಕಥೆ.

## ಸಂಪಾದಿತ

೧೯೫೮- ಕರ್ಣಾಟಕ ಭಾರತ ಕಥಾಮಂಜರಿ (ಮಾಸ್ತಿಯೊಂದಿಗೆ ಸಹ ಸಂಪಾದಿತ ಕೃತಿ)

## ಆಯ್ದ ಕವನ ಸಂಕಲನಗಳು

೧೯೬೫- ಕಾವ್ಯರ್ಷಿ ಕುವೆಂಪು ಕೊಟ್ಟ ಕನ್ನಡ ದೀಕ್ಷೆ
೧೯೬೮- ಕನ್ನಡಿ ಡಿಂಡಿಮ
೧೯೭೨- ಪ್ರಾರ್ಥನಾ ಗೀತಾಂಜಲಿ
೧೯೭೩- ಕಬ್ಬಿಗನ ಕೈಬುಟ್ಟಿ
೧೯೭೭- ಕ್ರಾಂತಿಕಹಳೆ
೧೯೮೪- ಆಯ್ದ ಕುವೆಂಪು ಕವನಗಳು

# ಇ. ಕುವೆಂಪು ಅವರಿಗೆ ಸಂದ ಪ್ರಶಸ್ತಿಗಳು: ಗೌರವಗಳು

೧. **ಪ್ರಶಸ್ತಿಗಳು**

೧. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಸಸ್ತಿ - ೧೯೫೫

೨. ಪದ್ಮ ಭೂಷಣ - ೧೯೫೮

೩. ರಾಷ್ಟ್ರಕವಿ - ೧೯೬೪

೪. ಜ್ಞಾನಪೀಠ ಪ್ರಶಸ್ತಿ - ೧೯೬೭

೫. ಕೇಂದ್ರ ಸಾಹಿತ್ಯ ಅಕಾಡಮಿ ಫೆಲೋಷಿಪ್ - ೧೯೭೯

೬. ಪದ್ಮ ವಿಭೂಷಣ - ೧೯೮೮

೭. ಪಂಪ ಪ್ರಶಸ್ತಿ - ೧೯೮೮

೮. ಕರ್ನಾಟಕ ರತ್ನ - ೧೯೯೨

೨. **ಗೌರವ ಡಾಕ್ಟರೇಟ್ ಪದವಿಗಳು:**

೧. ಮೈಸೂರು ವಿಶ್ವವಿದ್ಯಾನಿಲಯ - ೧೯೫೬

೨. ಕರ್ನಾಟಕ ವಿಶ್ವವಿದ್ಯಾನಿಲಯ - ೧೯೬೬

೩. ಬೆಂಗಳೂರು ವಿಶ್ವವಿದ್ಯಾನಿಲಯ - ೧೯೬೯

೪. ಗುಲ್ಬರ್ಗಾ ವಿಶ್ವವಿದ್ಯಾನಿಲಯ - ೧೯೮೫

೫. ಕಲಾ ಮತ್ತು ಸಾಂಸ್ಕೃತಿಕ ವಿಶ್ವ ಅಕಾಡೆಮಿ ಸ್ಯಾನ್‌ಫ್ರಾನ್ಸಿಸ್ಕೊ - ೧೯೮೬

೬. ಮಂಗಳೂರು ವಿಶ್ವವಿದ್ಯಾನಿಲಯ - ೧೯೮೯

೭. ಕಾನ್‌ಪುರ ವಿಶ್ವವಿದ್ಯಾನಿಲಯ - ೧೯೯೩

೮. ಕುವೆಂಪು ವಿಶ್ವವಿದ್ಯಾನಿಲಯ - ೧೯೯೩

## ಈ. ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ಬರುವ ಕೌಟುಂಬಿಕ ನಕ್ಷೆಗಳು.

### ೧. ಸಿಂಬಾವಿ

**ಭರಮ್ಮೆ ಹೆಗ್ಗಡೆ**

→ ಜಟ್ಟಮ್ಮ [ ಹೆಂಡತಿ-ಹಳೆಮನೆ ಶಂಕರಪ್ಪ ಹೆಗ್ಗಡೆಯ ತಂಗಿ]

→ ಲಕ್ಕಮ್ಮ [ತಂಗಿ]

→ ಮಂಜಮ್ಮ [ಎರಡನೆಯ ಹೆಂಡತಿಯಾಗಿ ಬರುವ ಹಳೆಮನೆ ಸುಬ್ಬಣ್ಣ ಹೆಗ್ಗಡೆಯ ಮಗಳು]

**ಜೀತದಾಳುಗಳು**

→ ಕರಿಸಿದ್ದ

→ ಗುತ್ತಿ

→ ಮರಾಟಿ ಮಂಜ

→ ದೊಳ್ಳ

→ ಸಣ್ಣ ತಿಮ್ಮ

→ ಬುಲ್ಡ

### ೨. ಕೋಣೂರು

**ರಂಗಪ್ಪಗೌಡ**

→ ದಾನಮ್ಮ [ತಾಯಿ, ಕಾಗಿನಹಳ್ಳಿಯ ಅಮ್ಮ]

→ ಮುಕುಂದಯ್ಯ [ತಮ್ಮ-ಹೂವಳ್ಳಿ ಚಿನ್ನಮ್ಮನೊಡನೆ ವಿವಾಹ]

→ ರಂಗಮ್ಮ [ಅಕ್ಕ -ಹಳೆಮನೆ ದೊಡ್ಡಣ್ಣ ಹೆಗ್ಗಡೆ ಪತ್ನಿ]

→ ತಿಮ್ಮು [ಮಗ]

**ಜೀತದಾಳುಗಳು**

| ಚೀಂಕ್ರ | ಪಿಜಣ | ಐತ | ಮೊಡಂಕಿಲ |
|---|---|---|---|
| → ದೇಯಿ [ಹೆಂಡತಿ] | → ಅಕ್ಕಣಿ[ಹೆಂಡತಿ] | ಪೀಂಚಲು[ಹೆಂಡತಿ] | ಬಾಗಿ [ಹೆಂಡತಿ] |
| → ಮೂವರು ಮಕ್ಕಳು | | | |

## ೩. ಹಳೆಮನೆ

**ರಂಗಪ್ಪಗೌಡ**

- → ಸುಬ್ಬಣ್ಣ ಹೆಗ್ಗಡೆ
- → ದೊಡ್ಡಣ್ಣ ಹೆಗ್ಗಡೆ [ಹಿರಿಮಗ]
- → ರಂಗಮ್ಮ [ಹೆಂಡತಿ] ಧರ್ಮು[ಮಗ]
- → ತಿಮ್ಮಪ್ಪ ಹೆಗ್ಗಡೆ [ಕಿರಿಮಗ]
- → ಮಂಜಮ್ಮ [ಮಗಳು ಸಿಂಬಾವಿ ಭರಮೈ ಹೆಗ್ಗಡೆ ಜೊತೆ ವಿವಾಹ]

**ಶಂಕರಪ್ಪ ಹೆಗ್ಗಡೆ**

- → ಸೀತಮ್ಮ [ಹೆಂಡತಿ]
- → ರಾಮು [ಮಗ]
- → ಕೆಂಪಿ [ಆಳು]

**ಜೀತದಾಳುಗಳು**

- ↓ ಮಂಜ
- ↓ ತಿಮ್ಮ
  - ↓ ಸಿದ್ದಿ[ಹೆಂಡತಿ]
    - ↓ ಗಂಗ[ಮಗ]
- ↓ ಕುಳವಾಡಿಸಣ್ಣ
  - ಪುಟ್ಟಿ[ಮಗಳು]
- ↓ ಭೈರ
- ↓ ಬಚ್ಚ
- ↓ ಸಣ್ಣತಿಮ್ಮ
- ↓ ಪುಟ್ಟ

## ೪. ಬೆಟ್ಟಳ್ಳಿ

**ಕಲ್ಲಯ್ಯಗೌಡ**

- → ದೊಡ್ಡಮ್ಮ ಹೆಗ್ಗಡತಿ [ಹೆಂಡತಿ]
- → ದೇವಯ್ಯ [ಮಗ]
  - → ದೇವಮ್ಮ [ಹೆಂಡತಿ-ಕೊಲಿಬಾರು ಮುಕುಂದಯ್ಯನ ತಂಗಿ]
  - → ಚಲುವಯ್ಯ [ಮಗು]
  - → ಕಾಡು [ಕಿರಿಯ ಮಗ]

**ಜೀತದಾಳುಗಳು**

- → ದೊಡ್ಡಬೀರ
  - → ಸೇಸಿ [ಹೆಂಡತಿ]
  - → ಸಣ್ಣಬೀರ [ದೊಡ್ಡ ಮಗ]
  - → ಪುಟ್ಟಂಬೀರ [ಕಿರಿ ಮಗ]
    - → ಚಿಕ್ಕಪುಟ್ಟಿ [ಹೆಂಡತಿ]
  - → ತಿಮ್ಮಿ [ಮಗಳು] [ಗುತ್ತಿಯೊಂದಿಗೆ ಮದುವೆ]
- → ಬಚ್ಚ

೫. **ಮೇಗರವಳ್ಳಿ**

→ ಕಣ್ಣಾ ಪಂಡಿತ
→ ಇಜಾರದ ಸಾಬು
→ ಕರೀಂ ಸಾಬು [ಕರಿಮೀನು ಸಾಬು]
→ ಲುಂಗಿ ಸಾಬು
→ ಪುಡಿ ಸಾಬಿ
→ ಅಂತಕ ಸೆಟ್ಟಿ
  → ಕಾವೇರಿ [ಮಗಳು
  → ಸುಬ್ಬಯ್ಯಶೆಟ್ಟಿ [ಗಂಡ]
  → ಕಿಟ್ಟಯ್ಯ ಶೆಟ್ಟಿ [ಸೋದರಳಿಯ]
→ ಜೀವರತ್ನಯ್ಯ [ಪಾದ್ರಿ]
  → ಜ್ಯೋತಿರ್ಮಣಿಯಮ್ಮ [ಮಗಳು]

೬. **ಲಕ್ಕುಂದ:**

→ ಸೇಸಾನಾಯ್ಕ
→ ಹಮೀರ ನಾಯ್ಕ [ಮಗ]
→ ಕಾಡಿ [ಅತ್ತೆ]
→ ಸೀತೂರು ತಿಮ್ಮಾನಾಯ್ಕ [ಸೇಸಾನಾಯ್ಕನ ಸಂಬಾನಿ]

ರಂಗಾ

ಪುಟ್ಟನಾಯ್ಕ
→ ಚೌಡಿ [ಹೆಂಡತಿ]

೭. **ಕಲ್ಲೂರು**

→ ಸಾಹುಕಾರ ಮಂಜಾಭಟ್ಟ
ಕಿಟ್ಟೆತಾಳ
  → ನಾರಾಯಣ ಭಟ್ಟ [ಮಗ]

೮. **ಹೂವಳ್ಳಿ**

ವೆಂಕಟಣ್ಣ
→ ನಾಗಕ್ಕ [ವೆಂಕಟಣ್ಣನ ಎರಡನೆಯ ಹೆಂಡತಿ]
→ ಚಿನ್ನಮ್ಮ [ವೆಂಕಟಣ್ಣನ ಮೊದಲನೆ ಹೆಂಡತಿ ಮಗಳು]
→ ಅಜ್ಜಿ [ಚಿನ್ನಮ್ಮನ ತಾಯಿಯ ತಾಯಿ]

೯. **ಇತರೆ ಪಾತ್ರಗಳು**

→ ಗಡ್ಡದಯ್ಯ
→ ಕಾನೂರು ಚಂದ್ರಯ್ಯಗೌಡ
→ ಸೀತೆಮನೆ ಸಿಂಗಪ್ಪಗೌಡ
→ ಮಾಯಿಂದಪ್ಪ [ಪೋಲೀಸಿನವನು]
→ ಹಳೆಪೈಕದ ವೆಂಕಿ
→ ನಾಗತ್ತೆ [ನಾಗಕ್ಕನ ಮೊದಲನೆ ಗಂಡನ ತಾಯಿ]
→ ಹೊಸಕೇರಿ ಬಸಪ್ಪನಾಯಕ
→ ಐಗಳು ಅನಂತಯ್ಯ
→ ಮೂಗೂರು ಗಣಮಗ